B A Belliappa

# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 2 ಸಂಚಿಕೆ : 5 ಮಾರ್ಚ್ 1 ರಿಂದ 15-1998 ಪುಟಗಳು : 24 ರೂ. 5

ಚಿತ್ರ : ಯಶವಂತ್ ಸಿ. ಬೋಜಪ್ಪ, ಹಾರಂಗಿ

## ದಕ್ಷಿಣದ ಕಾಶಿ ಎಂದೇ ಖ್ಯಾತಿ ಪಡೆದ
## ಭಾಗಮಂಡಲದ ಭಗಂಡೇಶ್ವರ ದೇವಾಲಯ

# ವಿಶೇಷ ಸಭೆ

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲಾ ಗೌಡ ಮಹಿಳಾ ಸಂಘಟನೆ ಮೈಸೂರು, ಇದರ ವತಿಯಿಂದ ದಿನಾಂಕ 22-3-98ರ ಭಾನುವಾರ ಮಧ್ಯಾಹ್ನ 2-00 ಗಂಟೆಗೆ ಸರಿಯಾಗಿ ಕೊಡಗು ವಿದ್ಯಾಸಂಘ, ಮೈಸೂರು ಇಲ್ಲಿ ಸಭೆಯನ್ನು ಕರೆಯಲಾಗಿದೆ. ಆ ದಿನ ಏಪ್ರಿಲ್ 12ನೇ ತಾರೀಖಿನಂದು ನಡೆಯುವ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಭಾಗವಹಿಸುವ ಎಲ್ಲಾ ಮಹಿಳಾ ಕಲಾವಿದರು ತಪ್ಪದೆ ಹಾಜರಾಗಬೇಕೆಂದು ತಿಳಿಸಲಾಗಿದೆ.

ಕಾರ್ಯದರ್ಶಿ

---

## ಧನ್ಯವಾದಗಳು

**ಶ್ರೀ ಪೇರಿಯನ ಪೂವಯ್ಯ ಜಯಾನಂದಾ, ಕಾಫಿ ಪ್ಲಾಂಟರ್, ಅಭ್ಯತ್‌ಮಂಗಲ, ಸಿದ್ದಾಪುರ ಇವರು ಕೊಡಗು ಸಂಗಾತಿಯ ಜೀವಾವಧಿ ಸದಸ್ಯತ್ವ ರೂ. 1000/- ಕೊಟ್ಟು ಪತ್ರಿಕೆಯ ಬೆಳವಣಿಗೆಗೆ ಸಹಕರಿಸಿದ್ದಾರೆ. ಇವರಿಗೆ ಬಳಗದ ಧನ್ಯವಾದಗಳು.**

**ಶ್ರೀ ತಲಕಾಡು ಆರ್. ಮುದ್ದೇಗೌಡರು, ಲೇಖಕರಾಗಿ, ತಲಕಾಡು ಗಂಗರ ಇತಿಹಾಸವನ್ನು ಬರೆದು ಕೊಡಗು ನಾಡಿನ ಜನಕ್ಕೆ ಚಿರಪರಿಚಿತರಾಗಿದ್ದಾರೆ. ಇವರು ಪತ್ರಿಕೆಯ ಬೆಳವಣಿಗೆಯ ದೃಷ್ಟಿಯಿಂದ ಜೀವಾವಧಿ ಸದಸ್ಯತ್ವ ರೂ. 1000- ಕೊಟ್ಟು ಸಹಕರಿಸಿದ್ದಾರೆ. ಇವರಿಗೆ ನಮ್ಮ ಸಂಗಾತಿ ಬಳಗದ ಹೃತ್ಪೂರ್ವಕ ವಂದನೆಗಳು.**

# ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಾರ್ಯ ನಿರ್ವಾಹಕಿ :
**ಕು॥ ಗೀತಾ ಮೋಂಟಡ್ಕ**

ಪತ್ರಿಕಾ ಪ್ರತಿನಿಧಿ :
**ಕು॥ ಧನು ಚೆರಿಯುಮನೆ**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಞ್ಞಾಪುರ ಧರಣಿ ಗಣಪತಿ**

ಮುದ್ರಕರು :
**ಮುಞ್ಞಾಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**

ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ್**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 35, "ಸವಿತಾ ನಿಲಯ"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, **ಮೈಸೂರು-12.**
ಫೋನ್ : **516771**

## ಒಳನೋಟ

ಪುಟಗಳು



### ಅರೆ ಭಾಷಿಕ ವಿಭಾಗ



**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :

### ಕೊಡಗಿನ ಗೌಡರ ಮಹಿಳಾ ಹಾಗೂ ಯುವಕ ಸಂಘಟನೆಗಳು

ಇತ್ತೀಚಿನ ದಿನಗಳಲ್ಲಿ ಕೊಡಗಿನ ಗೌಡರಲ್ಲಿ ಮಹಿಳಾ ಮತ್ತು ಯುವಕ ಸಂಘಟನೆಗಳಾಗುತ್ತಿರುವ ಸುದ್ಧಿನನ್ನು ಸಮಾಜದಲ್ಲಿ ಆಗುತ್ತಿರುವ ಅಭಿವೃದ್ಧಿಯ ಶುಭಸೂಚನೆಗಳಾಗಿವೆ.

ಹಿಂದೂ ಸಂಸ್ಕೃತಿಯಲ್ಲಿ ಮಹಿಳೆಯರ ಸ್ಥಾನ ಅತಿ ದೊಡ್ಡದು. ಮಹಿಳೆಗೆ ಹೆಚ್ಚಿನ ಗೌರವವನ್ನು ಹಿಂದೂ ಸಮಾಜ ಸೂಚಿಸಿದೆ. ಆದುದರಿಂದ ಭಾರತದಲ್ಲಿ ಹರಿಯುತ್ತಿರುವ ಹೆಚ್ಚಿನ ನದಿಗಳಿಗೆಲ್ಲಾ ಮಹಿಳೆಯ ಹೆಸರನ್ನಿಟ್ಟಿದ್ದಾರೆ. ಉದಾಹರಣೆಗೆ ಗಂಗಾ, ಯಮುನಾ, ಕಾವೇರಿ, ಗೋದಾವರಿ ಎಂಬುದಾಗಿ. ಅದೇ ರೀತಿ ಐಶ್ವರ್ಯದ, ವಿದ್ಯೆಯ ಹಾಗೂ ಶಕ್ತಿಯ ದೇವತೆಗಳು ಲಕ್ಷ್ಮಿ, ಸರಸ್ವತಿ ಹಾಗೂ ಪಾರ್ವತಿ. ಅಲ್ಲದೆ ಮಹಿಳೆಯೇ ಒಂದು ಸಂಸ್ಕೃತಿಯನ್ನು ಪೋಷಿಸಿ ಬೆಳೆಸುವವಳು, ಅವಳೇ ಸಂಸ್ಕೃತಿಯ ಶಿಲ್ಪಿ ಹಾಗೂ ಪೋಷಕಳು ಆದುದರಿಂದಲೇ ಕನ್ನಡ ನಾನ್ನುಡಿ "ತೊಟ್ಟಿಲ ತೂಗಿದ ಕೈ ಸಾಮ್ರಾಜ್ಯವಾಳುವ ಕೈ" ಎಂದು ಸಾರಿರುವುದು.

ಯಾವ ಸಮಾಜದಲ್ಲಿ ಮಹಿಳೆಯ ಸ್ಥಾನಮಾನಗಳಿಗೆ ಕೊರತೆ ಇದೆಯೋ, ಎಲ್ಲಿ ಮಹಿಳೆಯು ವಿದ್ಯಾ ಹೀನಳಾಗಿ ಮೂಢಳಾಗಿದ್ದಳೋ ಆ ಸಮಾಜ ದಿನದಿಂದ ದಿನಕ್ಕೆ ಅಧೋಪತನವನ್ನು ಕಾಣುತ್ತಿದೆ.

ಗಂಡಸು ಎಷ್ಟೇ ದೊಡ್ಡ ಹಣವಂತನಾಗಿದ್ದು, ವಿದ್ಯಾವಂತ, ಗುಣವಂತನಾಗಿದ್ದರೂ, ಮನೆಯ ಒಡತಿ ಅಜ್ಞಾನಿ, ವಿದ್ಯಾಹೀನ, ಗುಣಹೀನಳಾಗಿದ್ದರೆ ಆ ಸಂಸಾರ ಆ ಸಮಾಜ ಒಂದು ನರಕ ಯಾತನೆಗೆ ಗುರಿಯಾಗುವುದು. ಇದನ್ನರಿತೇ ಈಗಿನ ಸರ್ಕಾರಗಳು ಮಹಿಳೆ ಮತ್ತು ಮಕ್ಕಳ ಕಲ್ಯಾಣಕ್ಕಾಗಿ ಬೇಕಾದಷ್ಟು ಮಹಿಳೆ ಹಾಗೂ ಮಕ್ಕಳ ಯೋಜನೆಗಳನ್ನು ಹಮ್ಮಿಕೊಂಡಿವೆ. ಕೇಂದ್ರ ಹಾಗೂ ರಾಜ್ಯಸರ್ಕಾರಗಳು ಈ ಬಗ್ಗೆ ಬೇಕಾದಷ್ಟು ಹಣ ಖರ್ಚು ಮಾಡುತ್ತಿದೆ. ಜನತೆಯ ಅದರಲ್ಲೂ ಮಹಿಳೆ ಈ ವಿಷಯಗಳನ್ನು ತಿಳಿದುಕೊಂಡು ಸರ್ಕಾರದೊಡನೆ ಸ್ಪಂದಿಸಬೇಕು.

ಸರ್ಕಾರದ ಈ ಯೋಜನೆಗಳನ್ನು ನಮ್ಮ ಮಹಿಳಾ ಸಮಾಜಗಳು ಪಡೆಯುವುದಕ್ಕೆ ಪ್ರಯತ್ನಪಟ್ಟು ವಿದ್ಯಾವಂತ ಮಹಿಳೆ ಹಾಗೂ ಆರ್ಥಿಕವಾಗಿ ತೊಂದರೆಯಲ್ಲಿರುವ ಮಹಿಳೆಯರ ಪುರೋಭಿವೃದ್ಧಿಗೆ ಸಹಾಯಕವಾಗುವ ಯೋಜನೆಯನ್ನು ರೂಪಿಸಿಕೊಳ್ಳಬೇಕು. ಇದಕ್ಕೆ ಸರ್ಕಾರದಿಂದ ಸಿಗುವ ಸವಲತ್ತುಗಳನ್ನು ಪಡೆದುಕೊಳ್ಳಬೇಕು. ಇದಕ್ಕೆ ನಮ್ಮ ಸಮಾಜದ ರಾಜಕೀಯ ಧುರೀಣರು ಮತ್ತು ಅಧಿಕಾರಿ ವರ್ಗದವರು ಸಹಾಯ ಮಾಡಬೇಕು. ಇದೇ ರೀತಿ ಯುವಕ ಯುವತಿಯರು ತಮ್ಮ ಮುಂದಿನ ಉದ್ಯೋಗಾವಕಾಶ ಜೀವನದ ಹಾದಿ ಸುಸಂಸ್ಕೃತ ರೀತಿಯಲ್ಲಿ ಮಾರ್ಪಾಡಿಸುವುದಕ್ಕೆ ಪ್ರಯತ್ನ ಪಡಬೇಕು.

ಮಹಿಳಾ ಮತ್ತು ಯುವಕ ಘಟಕಗಳು ಸಮಾಜದಲ್ಲಿ ದಿನೇ ದಿನೇ ಹೆಚ್ಚುತ್ತಿರುವ ವರದಕ್ಷಿಣೆಯ ಪಿಡುಗು, ದುಂದುವೆಚ್ಚದ ಮದುವೆ, ವಿಳ್ಯಶಾಸ್ತ್ರದಲ್ಲಿ ಖರ್ಚು, ಚಪ್ಪರ ಸಮಾರಂಭದಲ್ಲಿ ನೀಶಾಸೇವನೆ, ಕ್ಲಬ್‌ಗಳಲ್ಲಿ ಬಾರ್‌ಗಳಲ್ಲಿ ನಡೆಯುವ ದುಂದುಗಾರಿಕೆ ಹಬ್ಬ ಹರಿದಿನಗಳಲ್ಲಿ ಕುಡಿತಕ್ಕಾಗಿ ಧಾರಾಕಾರವಾಗಿ ಖರ್ಚಾಗುವ ರೀತಿಯನ್ನು ತಪ್ಪಿಸಿ ವೈಯಕ್ತಿಕ ಹಾಗೂ ಸಾಮಾಜಿಕ ಅಭಿವೃದ್ಧಿಯತ್ತ ವಿನಿಯೋಗಿಸುವಂತೆ ಮಾಡಬೇಕು. ಇದಕ್ಕೆ ಮಹಿಳೆಯರ ಧೃಡ ನಿರ್ಧಾರ ಮಾತ್ರ ಸಾಧ್ಯ.

ಆದ್ದರಿಂದ ನಮ್ಮ ಸಂಸ್ಕೃತಿ ಹಾಗೂ ಆರ್ಥಿಕ ವಿದ್ಯಾಭ್ಯಾಸದ ಮುನ್ನಡೆಗೆ ನಮ್ಮ ಮಹಿಳೆಯರ ಪಾತ್ರ ಬಹು ಮಹತ್ವದಾಗಿದೆ. ಮಹಿಳೆಯೇ ಒಂದು ಕುಟುಂಬ ಹಾಗೂ ಸಮಾಜದ ಶಿಲ್ಪಿ. ಈ ವಿಷಯಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಮಹಿಳಾ ಹಾಗೂ ಯುವ ಘಟಕಗಳು ಶ್ರಮಿಸಲೆಂದು ಸಂಗಾತಿಯ ಮನಪೂರ್ವಕ ಹಾರೈಕೆ. ○

---

### ಭಾರತದ ಆಶ್ಚರ್ಯದ ಸಂಗತಿಗಳು

ಎತ್ತರದ ಶಿಖರ : ಕಾಂಚನ ಗಂಗಾ
ದಟ್ಟ ಜನಸಾಂದ್ರತೆ ರಾಜ್ಯ : ಕೇರಳ
ಎತ್ತರದ ಗೋಪುರ : ಕುತುಬ್ ಮಿನಾರ್
ಎತ್ತರದ ಆಣೆಕಟ್ಟು : ಬಾಕ್ರಾನಂಗಲ್

# ಬಡತನದಲ್ಲಿ ಬೆಳೆದ ಬಂಗಾರದ ಪುಷ್ಪ

**ಬ**ಡತನ ಮಾನವನಿಗೆ ವರವೂ ಹೌದು, ಶಾಪವೂ ಹೌದು. ಅದನ್ನು ಮೆಟ್ಟಿ ನಿಂತು ಬೆಳೆಯುತ್ತೇನೆ ಎಂದು ಛಲಮಾಡಿ ನಿಂತರೆ ಯಶಸ್ಸನ್ನು ಕಾಣುವುದು ಖಂಡಿತ ಸಾಧ್ಯ ಎಂಬುದನ್ನು ಸಾಧಿಸಿ ತೋರಿಸಿಕೊಟ್ಟ ವ್ಯಕ್ತಿ ಎಂದರೆ ನಮ್ಮ ಅಮ್ಮಾಜೀರ ಪೊನ್ನಪ್ಪ. ಇವರನ್ನು ಕಿತ್ತು ತಿನ್ನುತ್ತಿದ್ದ ಬಡತನದ ಬೇಗೆಯಿಂದ ಪುಟಿದೆದ್ದ ಚಿನ್ನದಂತೆ ಎದ್ದು ಬಂದ ವ್ಯಕ್ತಿ ಇವರು.

● ಪಿ. ಶಂಕರ ಬಳ್ಳೇಕೆರೆ

ಸಿದ್ದಾಪುರದ ನೆಲ್ಲಿ ಹುದಿಕೇರಿಯಲ್ಲಿ ಜನಿಸಿದ ಪೊನ್ನಪ್ಪ ತಂದೆಗೆ ಒಬ್ಬನೇ ಮಗ, ಇಬ್ಬರು ಅಕ್ಕ–ತಂಗಿಯರು. ಮನೆಯಲ್ಲಿ ಬಡತನ.ತಂದೆ ಕಾಫಿ ತೋಟದಲ್ಲಿ ರೈಟರ್, ತಾಯಿ ತೋಟದಲ್ಲಿ ಕೆಲಸ, ಮಕ್ಕಳು ತಾವೇ ಬೆಳೆಯುತ್ತಿದ್ದರು. ಹಣ್ಣು ಹೂವುಗಳನ್ನು ಮಾರಿಕೊಂಡು, ಕಷ್ಟಪಟ್ಟು ಓದುತ್ತಿದ್ದರು. ತಂದೆಗೆ ಬರುತ್ತಿದ್ದ ಸಂಬಳ, ತೋಟದಲ್ಲಿ ಬರುತ್ತಿದ್ದ ಆದಾಯ,ಹೊಟ್ಟೆಗೆ ಬಟ್ಟೆಗೆ ಸಾಲುತ್ತಿರಲಿಲ್ಲ.

ಆದರೂ ಕಷ್ಟಪಟ್ಟು ಓದಿ ಎಸ್. ಎಸ್. ಎಲ್.ಸಿ.ಯಲ್ಲಿ ಮೊದಲ ದರ್ಜೆಯಲ್ಲಿ ಪಾಸಾದಾಗ, ಅಂಕಪಟ್ಟಿ ಹಿಡಿದು, ಬೆಂಗಳೂರಿನ ತಮ್ಮ ಸಂಬಂಧಿಕರ ಮುಂದೆ ಓದಲು ಸಹಾಯ ಬೇಡಿದರು. ಆದರೆ ಯಾರು ಸಹಾಯ ಮಾಡಲಿಲ್ಲ. ಅನಿವಾರ್ಯವಾಗಿ ಅಲ್ಲಿ–ಇಲ್ಲಿ ಕೆಲಸ ಮಾಡಿ ಅದು ಸರಿ ಕಾಣದೆ ಮತ್ತೆ ಊರಿಗೆ ಬಂದು ವ್ಯವಸಾಯದಲ್ಲಿ ತೊಡಗಿದರು.

ವ್ಯವಸಾಯದಲ್ಲಿ ಲಾಭ ಕಾಣದೆ ಪುನಃ ಬೆಂಗಳೂರಿಗೆ ಬಂದು ಮಿಲಿಟರಿ ಸೇರಿದರು. ಕೆಟ್ಟಸ್ನೇಹಿತರ ಸಹವಾಸದಿಂದ ದುಬಾಯಿಗೆ ಹೋಗಲು ಯೋಚಿಸಿ ಅವನ್ನು ಕೈಬಿಟ್ಟು ಮಿಲಿಟರಿಯನ್ನು ಬಿಟ್ಟರು. ತಮ್ಮ ಸಂಬಂಧಿಯ ಜೊತೆಯಲ್ಲಿ ಚಿಕ್ಕ ಪುಟ್ಟ ಕೆಲಸ ಮಾಡಿಕೊಂಡು ಇದ್ದರು.

ಇವುಗಳ ಜೊತೆಗೆ ಡ್ಯಾನ್ಸ್, ಡ್ರಾಮ ಹುಚ್ಚು ಇತ್ತು. ಇದರಿಂದ ಜೀವನ ಸಾಗಿಸಬಹುದೆಂದು ಯೋಚಿಸುತ್ತಿರುವಾಗ, ಒಬ್ಬಳು ಸಂಗಾತಿಯು ಸಿಕ್ಕಿದಳು. ಅವಳು ಸರ್ಕಾರಿ ನೌಕರಿಯಲ್ಲಿದ್ದಳು. 'ನನ್ನನ್ನು ಮದುವೆಯಾಗುವುದಾದರೆ,ನೀವು ಡ್ಯಾನ್ಸ್, ಡ್ರಾಮ, ಸಿನಿಮಾ ಇವುಗಳನ್ನು ಬಿಡಬೇಕು' ಎಂಬ ಷರತ್ತು ಹಾಕಿದಳು. ಅದಕ್ಕೆ ಒಪ್ಪಿಗೆ ನೀಡಿ 'ಅಣ್ಣಾಚೀರ ಲೀಲಾವತಿ'ಯನ್ನು ಬಾಳಸಂಗಾತಿಯಾಗಿ ಸ್ವೀಕರಿಸಿದರು. ಇಲ್ಲಿಂದ ಇವರ ಜೀವನಕ್ಕೆ ಒಂದು ತಿರುವು ಸಿಕ್ಕಿತು.

ಒಬ್ಬನ ಯಶಸ್ಸಿನ ಹಿಂದೆ ಒಂದು ಹೆಣ್ಣು ಇರುತ್ತಾರೆ, ಎಂಬುದನ್ನು ಶ್ರೀಮತಿ ಲೀಲಾವತಿ ಸತ್ಯವಾಗಿಸಿದ್ದಾರೆ. ತಾಯಿಯ ಮಾತಿನಂತೆ ಒಂದು ಕೆಲಸ ಹಿಡಿದರು ಪೊನ್ನಪ್ಪ. ದಿನಪತ್ರಿಕೆಯೊಂದರ ಕಛೇರಿಯಲ್ಲಿ ಹತ್ತು ವರ್ಷಗಳ ಅನುಭವದಿಂದ ಅಧಿಕಾರಿಗಳ, ರಾಜಕಾರಣಿಗಳ ಪರಿಚಯವಾಗಿ ಅನುಭವ ಪಕ್ವವಾಯಿತು. ಬಾವನ ಸಹಾಯದಿಂದ ಬೆಂಗಳೂರಿನಲ್ಲಿ ಮನೆ ಕಟ್ಟಿದಕ್ಕೆ ತನ್ನ ಶ್ರೀಮತಿಯ ಸಹಾಯವನ್ನು ಯಾವಾಗಲೂ ನೆನೆಯುತ್ತಾರೆ.

ಸಮಾಜಕ್ಕೆ ಏನಾದರು ಒಂದು ಒಳ್ಳೆಯ ಕೆಲಸವನ್ನು ಮಾಡಬೇಕು ಎಂಬ ಹಂಬಲ ತೀವ್ರವಾಗಿ ಕಾಡುತ್ತಿತ್ತು. ಹಲವಾರು ಸ್ನೇಹಿತರ ಸಹಕಾರದಿಂದ ಕಾಡು ಕಾರೇನ ಹಳ್ಳಿಯಲ್ಲಿ ಕೊಡಗಿನ ರೀತಿಯ ಮಿನಿ ಕೊಡಗು 'ಕಾವೇರಿ ನಾಡು ಸಹಕಾರಿ ಸಂಸ್ಥೆ' ಯನ್ನು ಗೌಡ ಜನಾಂಗಕ್ಕೆ ಕಾಣಿಕೆಯಾಗಿ ಕೊಟ್ಟರು. ಉದ್ಘಾಟನಾ ಕಾರ್ಯಕ್ರಮದಲ್ಲಿ ತೋಟಂಬೈಲು ಬೆಳ್ಳಿಯಪ್ಪ 'ಕೆಂಪೇಗೌಡ ಬೆಂಗಳೂರು ಕಟ್ಟಿದ ಹಾಗೆಯೆ ಅಮ್ಮಾಜೀರ ಪೊನ್ನಪ್ಪ ಕಾವೇರಿ ನಾಡು ಕಟ್ಟಿದ್ದಾರೆ' ಎಂದು ಪ್ರಶಂಸಿಸಿದರು. ಇವರ



ಅಮ್ಮಾಜೀರ ಪೊನ್ನಪ್ಪ ದಂಪತಿಗಳು

ಕೆಲಸಕ್ಕೆ ಪ್ರೋತ್ಸಾಹ ನೀಡಿದ ಸ್ನೇಹಿತರು ಮುಂದೆ ಒಂದು ವಿದ್ಯಾ ಸಂಸ್ಥೆಯನ್ನು ಸ್ಥಾಪಿಸಲು ಪ್ರೇರೆಪಿಸಿದರು.

31-8-97ರಂದು ಕಾವೇರಿ ನಾಡು ಸಂಸ್ಥೆ ದ್ವಿತೀಯ ವಾರ್ಷಿಕೋತ್ಸವವನ್ನು ಕೈಲ್ ಮುಹೂರ್ತ ಹಬ್ಬದಂದು ಆಚರಿಸಿತು. ಅದೇ ಶುಭಸಮಾರಂಭದಲ್ಲಿ ಕಾವೇರಿ ನಾಡು ವಿದ್ಯಾಸಂಸ್ಥೆಯನ್ನು ಉದ್ಘಾಟಿಸಲಾಯಿತು

ಬೆಂಗಳೂರಿನಂತಹ ಮಹಾ ನಗರದಲ್ಲಿ ಗೌಡ ಜನಾಂಗದ ಒಬ್ಬ ವ್ಯಕ್ತಿ 'ಮಿನಿ ಕೊಡಗು' ಸೃಷ್ಟಿ ಮಾಡಿ ಅದರ ಮೂಲಕ ಜನಾಂಗದಜನರಿಗೆ ಸಹಾಯ ಮಾಡುತ್ತಿರುವುದು ಒಂದುಸಾಧನೆಎಂದುಗೌಡಸಮಾಜದ ಅಧ್ಯಕ್ಷ ತೋಟಂಬೈಲು ಬೆಳ್ಳಿಯಪ್ಪ ನುಡಿದಿದ್ದಾರೆ. ಬೈತಡ್ಕ ಜೋಯಪ್ಪ, ಬಾರಿಕೆ ರಾಘವಯ್ಯ, ಕುಂಚಡ್ಕ ಉಲ್ಲಾಸ.

14ನೇ ಪುಟ ನೋಡಿ

# ಚರಿತ್ರಾರ್ಹ ಅಮರ ಸುಳ್ಯ ದಂಗೆಯ ವೀರರು

○ ಎನ್. ಎಸ್. ದೇವಿಪ್ರಸಾದ್

**ಚ**ರಿತ್ರೆಯಲ್ಲಿ ಅಲಕ್ಷ್ಯಕ್ಕೆ ಒಳಗಾಗಿ "ಕಲ್ಯಾಣಪ್ಪನ ಕಾಟಕಾಯಿ" ಎಂಬ ಹಣೆಪಟ್ಟಿಯೊಂದಿಗೆ,ತಾತ್ಸಾರದಿಂದ ನೋಡಲ್ಪಡುತ್ತಿರುವ, ಈ ಪ್ರದೇಶದಲ್ಲಿ ಸುಮಾರು 160 ವರ್ಷಗಳ ಹಿಂದೆ ನಡೆದ ಘಟನೆ-ಸ್ವಾತಂತ್ರ್ಯಆಂದೋಲನದ ಒಂದು ಪ್ರಮುಖ ಹೆಜ್ಜೆ. ಇದಕ್ಕೆ ಸಾಕಷ್ಟು ಆಧಾರಗಳು ಆಗ ಕೆನರಾದ ಕಲೆಕ್ಟರರಾಗಿದ್ದ ಎಂ. ಲೆವಿನನ ವರದಿ ಮತ್ತು ರಿಕ್ತರನ ಕೂರ್ಗ್ ಗೆಜೆಟಿಯರ್‌ನಲ್ಲಿ ಸಿಗುತ್ತವೆ. ಅಲ್ಲದೆ ತಿ.ತಾ. ಶರ್ಮರ "ಕರ್ನಾಟಕದಲ್ಲಿ ಸ್ವಾತಂತ್ರ್ಯ ಸಂಗ್ರಾಮ" ಎಂಬ ಚರಿತ್ರಾ ಗ್ರಂಥದಲ್ಲಿಯೂ ಇನ್ನಷ್ಟು ವಿವರಗಳು ಸಿಗುತ್ತವೆ. ಇದನ್ನು ಕರ್ನಾಟಕ ಸರಕಾರವು 1957ರಲ್ಲಿ ಭಾರತ ಸ್ವಾತಂತ್ರ್ಯ ಸಂಗ್ರಾಮದ ಶತಮಾನೋತ್ಸವ ಆಚರಿಸುವ ಸಂದರ್ಭದಲ್ಲಿ ಪ್ರಕಟಿಸಿತ್ತು. ಟೀಪು ಸುಲ್ತಾನ ಬ್ರಿಟಿಷರನ್ನು ಎದುರಿಸುತ್ತಿದ್ದ ಕಾಲದಲ್ಲಿ ಆತನ ಸಾಮಂತರಾಗಿದ್ದ ಪಶ್ಚಿಮ ಘಟ್ಟದ ಮೇಲಿನ ಎಲ್ಲಾ ಪಾಳೇಗಾರರು ಆತನನ್ನು ಬೆಂಬಲಿಸಿದ್ದರು. 1792ರಲ್ಲಿ ಟಿಪ್ಪು ಸುಲ್ತಾನನು ಸೋತು ಸಂಧಾನ ಮಾಡಿಕೊಂಡಾಗ ಆತನ ಮಕ್ಕಳನ್ನು ಒತ್ತೆ ಇರಿಸಬೇಕಾಯಿತು. ಅಲ್ಲದೆ ರಾಜ್ಯದಲ್ಲಿ ನಲವತ್ತೊಂದೂವರೆ ಕೋಟಿ ವರಮಾನದ ಪ್ರದೇಶವನ್ನು ಬಿಟ್ಟು ಕೊಡುವ ತೀರ್ಮಾನಕ್ಕೆ ಬಂದಾಗ ಬ್ರಿಟಿಷರು ಕೊಡಗನ್ನು ಕೇಳಿದರು ಆಗ ಬಹುತೇಕವಾಗಿ ಕಾವೇರಿ ನದಿಯ ದಕ್ಷಿಣದ ಭೂಭಾಗ ಮಾತ್ರ ಕೊಡಗು ಎಂಬುದಾಗಿ ಗುರುತಿಸಲ್ಪಡುತ್ತಿತ್ತು ಅದರ ವರಮಾನ 24 ಸಾವಿರ ರೂಪಾಯಿ. ಇದು ಇಂಗ್ಲೀಷರ ಗಡಿಗೆ ತಾಗಿಕೊಂಡಿರಲಿಲ್ಲ. ಶ್ರೀರಂಗಪಟ್ಟಣಕ್ಕೆ ಒಂದು ಬಾಗಿಲಿದ್ದ ಹಾಗಿತ್ತು. ಹೆಚ್ಚೆಂದರೆ ಅಲ್ಲಿಂದ ಒಂದು ದಿನದ ಪ್ರಯಾಣ. ಟಿಪ್ಪುವು ಕೊಡಗು ಬಿಟ್ಟು ಕೊಡಲು ಒಪ್ಪಲಿಲ್ಲ. ಅದೊಂದು ವಿಚಾರದ ಮೇಲೆ ಇಡೀ ಒಪ್ಪಂದವೇ ಮುರಿದು ಬಿದ್ದು ಹೋಗಬಹುದೆಂದು ಒತ್ತಡ ತಂದರು.

ಈ ರೀತಿಯಲ್ಲಿ ವಶಕ್ಕೆ ತೆಗೆದುಕೊಂಡ ಕೊಡಗಿನ ಕೇಂದ್ರವನ್ನು ಆರಿಸಿಕೊಂಡು ಅಲ್ಲಿ ವೀರರಾಜೇಂದ್ರಪೇಟೆಯನ್ನು ಅದೇ ವರ್ಷ ಕಟ್ಟಿಸುತ್ತಾರೆ. ದೊಡ್ಡ ವೀರರಾಜ ಎಂಬಾತನಿಗೆ ವಾರ್ಷಿಕ 24 ಸಾವಿರ ರೂಪಾಯಿ ಕೊಡಬೇಕೆಂದು ಒಪ್ಪಂದ ಮಾಡಿಕೊಂಡು ಕೊಡಗನ್ನು ಆತನ ವಶಕ್ಕೆ ಕೊಡುತ್ತಾರೆ. ಮೂರು ವರ್ಷಗಳ ನಂತರ ಆತ ನಾಕುನಾಡು ಅರಮನೆ ಕಟ್ಟಿ ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತಾನೆ.

ಹದಿನೆಂಟನೆಯ ಶತಮಾನದೊಂದಿಗೆ ಟಿಪ್ಪು ಸುಲ್ತಾನನ ಅಧ್ಯಾಯ ಕೊನೆಗೊಳ್ಳುತ್ತದೆ. ಮುಂದೆ ಬ್ರಿಟಿಷರಿಗೆ ವಿರೋಧಿಗಳಾಗಿ ಮುಂದುವರಿದ ಆತನ ಸಾಮಂತರನ್ನು ಸೆರೆ ಹಿಡಿಯಲು ಪ್ರಯತ್ನಿಸುತ್ತಾರೆ. ಐಗೂರಿನ ವೆಂಕಟಾದ್ರಿ ನಾಯಕನನ್ನು ಸೆರೆ ಹಿಡಿಯಲು ವೆಲ್ಲೆಸ್ಲಿ ಸೈನ್ಯಕ್ಕೆ ಸಾಧ್ಯವಾಗುವುದಿಲ್ಲ. ಕೊನೆಗೆ ಪೂರ್ಣಯ್ಯನ ದಂಡು ಬಂದು ಮೋಸದಿಂದ ಆತನನ್ನು ಸೆರೆಹಿಡಿದಿದ್ದು ಲಾವಣಿ ರೂಪದಲ್ಲಿ ಪ್ರಕಟವಾಗಿದೆ. 10-2-1802ರಲ್ಲಿ ಆತನನ್ನು ಗಲ್ಲಿಗೇರಿಸಿದ ಘಟನೆ ಆತನ ಪ್ರಜೆಗಳಿಗೆ ನೋವನ್ನುಂಟು ಮಾಡಿತು. ಮುಂದೆ ಅಮರ ಸುಳ್ಯ ದಂಗೆಗೆ ಅದೇ ಮುಖ್ಯ ಕಾರಣವಾಯಿತು.

1804ರಲ್ಲಿ ಐಗೂರು ರಾಜ್ಯದಲ್ಲಿದ್ದ ಅಮರ ಸುಳ್ಯ ಸೀಮೆ ಮತ್ತು ಏಳು ಸಾವಿರ ಸೀಮೆಗಳನ್ನು ಅರಮನೆ ಸೀಮೆ ಎಂದು ಕರೆಯಲ್ಪಡುತ್ತಿದ್ದ ಕೊಡಗಿಗೆ ಸೇರಿಸಲಾಯಿತು. ಆತನ ರಾಜ್ಯದ ಜನರು ಕೊಡಗಿನ ಅರಸರ ಆಳ್ವಿಕೆಯನ್ನು ಬಹಳ ಕಾಲ ಸ್ವೀಕರಿಸಿದಂತೆ ಕಂಡು ಬರುವುದಿಲ್ಲ. ಚಿಕ್ಕ ವೀರರಾಜನ ತಂಗಿ ಗಂಡ ಚನ್ನಬಸಪ್ಪ ರಾಜನ ವಿರುದ್ಧ ಜನರನ್ನು ಸಂಘಟಿಸತೊಡಗುತ್ತಾನೆ. ಬ್ರಿಟಿಷರು ಚಿಕ್ಕವೀರರಾಜನನ್ನು ಹದ್ದುಬಸ್ತಿನಲ್ಲಿಡಲು ಚೆನ್ನಬಸಪ್ಪನನ್ನು ಬೆಂಬಲಿಸಿದಂತೆ ಕಂಡು ಬರುತ್ತದೆ. ಅದೇ ಕಾಲದಲ್ಲಿ ಬ್ರಿಟಿಷರು ಭಾರತದ ಎಲ್ಲಾ ಕಡೆ ರಾಜರನ್ನು ಒಂದಲ್ಲ ಒಂದು ರೀತಿಯಲ್ಲಿ ಎದುರು ಹಾಕಿಕೊಂಡಿರುತ್ತಾರೆ. 1831ರಲ್ಲಿ ಮೈಸೂರಿನ ಅರಸರ ಪದಚ್ಯುತಿಯಾಗುತ್ತದೆ.ಮುಮ್ಮಡಿ ಕೃಷ್ಣರಾಜ ಒಡೆಯರ ಸಂಬಂಧಿಕ ಅರಪುರದ ಬಸಪ್ಪಾಜಿಯ ಅರಮನೆ ಗುಪ್ತಾಲೋಚನೆಯ ಕೇಂದ್ರವಾಗುತ್ತದೆ. ಇನ್ನೊಂದು ಕೇಂದ್ರವಾದ ತಿರುಚನಾಪಳ್ಳಿಯೊಂದಿಗೆ ನಿಕಟ ಸಂಬಂಧ ಏರ್ಪಡುತ್ತದೆ. ಅಷ್ಟರಲ್ಲಿಯೇ ಹುಲಿಕೊಂದ ನಂಜಯ್ಯನೆಂಬವನು ದೂರದ ಹೈದರಾಬಾದ್, ದೆಹಲಿ, ಲಾಹೋರ್‌ಗಳನ್ನು ಸಂಪರ್ಕಿಸಿ ಬರುತ್ತಾನೆ ಇಡೀ ಭಾರತದ ಉದ್ದಗಲದಲ್ಲಿ ಬ್ರಿಟಿಷರ ವಿರುದ್ಧ ದಂಗೆ ಏಳಲು ಜನರು ಸಿದ್ಧರಾಗುತ್ತಾರೆ.

ಬ್ರಿಟಿಷರನ್ನು ಎದುರಿಸಿದ ಚಿಕ್ಕವೀರರಾಜ ತನ್ನವರಿಂದಲೇ ಮೋಸಕ್ಕೆ ಬಲಿಯಾಗಿ ಸೋಲುತ್ತಾನೆ.ಆತನನ್ನು ಗಲ್ಲಿಗೇರಿಸುವುದು, ಕೊಲ್ಲುವುದು ಅಥವಾ ಕೊಡಗಿನಲ್ಲೇ ಸೆರೆಯಲ್ಲಿಡುವುದು ತೊಂದರೆ ಎಂದು ತಿಳಿದು ಆತ ಸ್ವಇಚ್ಛೆಯಿಂದ ಕಾಶಿಗೆ ಹೋಗುವ ನಾಟಕ 1834ರಲ್ಲಿ ಅಭಿನಯಿಸಲ್ಪಡುತ್ತದೆ. ಸ್ವಾಮಿ ಭಕ್ತನಾದ ದಿವಾನ ಪೊನ್ನಪ್ಪ ಬೆಂಗಳೂರು ತನಕ ಚಿಕ್ಕವೀರರಾಜರೊಡನೆ ಹೋಗುತ್ತಾನೆ. ಬ್ರಿಟಿಷ್ ಆಳ್ವಿಕೆಗೆ ಜನ ಬೆಂಬಲ ಕೊಡಗಿನಲ್ಲಿ ಸಿಗದ ಕಾರಣ ಪೊನ್ನಪ್ಪನನ್ನು ಹಿಂದೆ ಕರೆಸಿಕೊಳ್ಳಬೇಕಾಗುತ್ತದೆ.

ಆಗಿನ ಕಾಲದಲ್ಲಿ ರಾಜಭಕ್ತಿ ಜನರಲ್ಲಿ

12ನೇ ಪುಟ ನೋಡಿ

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

**ಪೆಟ್ಟಿ**ಗೆ ನೋಡುವುದಕ್ಕೆ ಮೊದಲು "ಎಲ್ಲರೂ ಪೆಟ್ಟಿಗೆ ನೋಡುವುದಕ್ಕೆ ಬರಬೇಕು" ಎಂದು ಊರುಗೌಡರು/ಮುಖ್ಯಸ್ಥರು ಸರ್ವರನ್ನು ಆಮಂತ್ರಿಸುವರು. ವಧುವು ಹತ್ತಿರದಲ್ಲಿಯೇ ಕುಳಿತಿರುವುದಕ್ಕೆ ಸ್ಥಳ ಇಡುವುದು ಮತ್ತು ಅವಳ ಸಮ್ಮುಖದಲ್ಲಿ ತೆರೆಯುವುದು. ಪೆಟ್ಟಿಗೆಯಲ್ಲಿ ತುಂಬಿಸಿರುವ ಬಟ್ಟೆ ಬರೆ, ಪಾತ್ರೆ, ವಗೈರೆ ಚಿನ್ನಾಭರಣ ಎಲ್ಲವನ್ನು ಓದಿ ಎತ್ತಿ ತೋರಿಸುತ್ತಾರೆ. ಹೀಗೆ ನೋಡಿ ಪೆಟ್ಟಿಗೆಯಲ್ಲಿದ್ದ ಸಾಮಾನುಗಳನ್ನು ಮೊದಲಿನಂತೆಯೇ ತುಂಬಿಸಿ ಇಡುವರುಆಗ. ಅವರು ಇಟ್ಟಿರುವ ಪಟ್ಟಿಗೂ ಪೆಟ್ಟಿಗೆಯಲ್ಲಿರುವ ಬಳುವಳಿಯ ಸಾಮಾನಿಗೂ ಸರಿ ಇರುವುದೆಂದು ದೃಢಪಡಿಸಿಕೊಳ್ಳುವುದೇ ಮುಖ್ಯ ಉದ್ದೇಶ, ಕಾರಣ ಹೆಣ್ಣು ವಹಿಸಿಕೊಡುವಾಗ ಅದನ್ನು ಮುಖ್ಯಸ್ಥರ ಜವಾಬ್ದಾರಿಯಲ್ಲಿ ಕೊಟ್ಟಿರುತ್ತಾರೆ. ಮುಖ್ಯಸ್ಥರು ತನ್ನ ಮೇಲಿನ ಜವಾಬ್ದಾರಿಯನ್ನು ವರನ ಮನೆಯವರಿಗೆ ವರ್ಗಾಯಿಸಿದಂತೆ ಆಯಿತು. ಪೆಟ್ಟಿಗೆ ನೋಡಿದವರಿಗೆ ಪೆಟ್ಟಿಗೆಯಲ್ಲಿರುವ ಬಿಸ್ಕತ್ತು ತಾಂಬೂಲಾದಿಗಳನ್ನು ಕೊಟ್ಟು ಸತ್ಕರಿಸುವುದು ಮತ್ತು ಸ್ವಲ್ಪ ಬಿಸ್ಕತ್ತು ಉಳಿಸುವುದು.

**ನಾಗೋಳಿ ಶಾಸ್ತ್ರದ ಊಟ :**

ವಧುವಿನ ಮಡಿಲಕ್ಕಿಯಿಂದ ಅವಳು ತಂದ ನೀರಿನಲ್ಲಿ ಅವಳೇ ಬಂದು ಪಾಯಸವನ್ನು ಮಾಡಬೇಕು. ಊಟದ ಸಮಯದಲ್ಲಿ ಹಸೆಗೆ ಸರಿಯಾಗಿ ಎರಡು ಎಲೆ ಹಾಕಿ ಒಂದರಲ್ಲಿ ವರನೂ, ಇನ್ನೊಂದರಲ್ಲಿ ವಧುವಿಗಾಗಿ ಕಾಯ್ದಿರಿಸಿ, ವಧುವು ಮೊದಲು ಪಾಯಸವನ್ನು ವರನ ಎಲೆಗೆಬಡಿಸಿ[ಮೂರು ಬಾರಿ ಬಡಿಸಬೇಕು] ನಂತರ ಅವಳ ಎಲೆಗೂ ಬಡಿಸಿ ಎಲ್ಲರಿಗೂ ಬಡಿಸಿದ ಬಳಿಕ ವರನ ಬಳಿ ಬಂದು ಸಟ್ಟುಗದಹಣ ಕೇಳುವುದು.ಆಗ ವರನು ಬಳಸಿದ ಸಟ್ಟುಗಕ್ಕೆ ಚಿಲ್ಲರೆಹಣ ಹಾಕಬೇಕು. ತದನಂತರ ವಧುವು ಕೂಡ ಕುಳಿತು ಊಟ ಮಾಡುವುದು. ಊಟ ಮಾಡುತ್ತಿರುವಾಗ ವರನು ತನ್ನ ಎಲೆಯಿಂದ ಸ್ವಲ್ಪ ಪಾಯಸವನ್ನು ವಧುವಿನ ಎಲೆಗೆ ಬದಲಿಸುವುದು ಇಲ್ಲಿ ಸಟ್ಟಗದ ಹಣ ಪಡೆದು, ಅವನ ಎಲೆಯ ಪಾಯಸವನ್ನು ಊಟ ಮಾಡಿದಾಗ, ಅವರಿಬ್ಬರು ದಂಪತಿಗಳು ಯಾವುದೇ ಬೇಧವಿಲ್ಲದೇ ಬದುಕುವುದು ಮತ್ತು ಅವನ ಅರ್ಧಾಂಗಿ ಎಂಬ ಬಿರುದು ದಕ್ಕಿದಂತೆ ಎಂದು ಹಿರಿಯರು ಹೇಳುತ್ತಾರೆ.

**ಸಂಗಾತಿ ಕಳುಹಿಸುವುದು[ಕುರುಂಟು]**

ಹೆಣ್ಣು ಇಳಿಸಿ ದಿಬ್ಬಣ ಕಳುಹಿಸುವಾಗ ವಧುವಿನ ಮನೆಯಿಂದ ಒಂದು ಚಿಕ್ಕ ಹುಡುಗಿಯನ್ನು ವಧುವಿನೊಂದಿಗೆ ಕಳುಹಿಸುವ ಕ್ರಮವು ಕೆಲವರು ಅನುಸರಿಸುತ್ತಾರೆ. ಏನೆಂದರೆ ಪರಿಚಯವಿಲ್ಲದ ಮನೆಗೆ ಬರುವ ವಧುವಿನೊಂದಿಗೆ ಮಾತುಕತೆಗಾಗಿ, ಮನೆಯಿಂದ ಹೊರಗೆ ವಿಸರ್ಜನೆ ಕಾರ್ಯಗಳಿಗೆ ಹೋಗುವಾಗ ವಧುವಿಗೆ ಸಹಕರಿಸುವುದಕ್ಕೆ ಮತ್ತು ವಧುವರರನ್ನು ಮಾತನಾಡಿಸಲು ನಡುವಿನಲ್ಲಿ ಒಂದು ಮಾಧ್ಯಮವಾಗಿಯೂ ಎಲ್ಲದಕ್ಕೂ ವಧುವಿನ ಅನುಕೂಲಕ್ಕಾಗಿ ಕಳುಹಿಸುವರು. ಇವಳಿಗೆ ಸಂಗಾತಿ ಇಲ್ಲವೇ ಕುರುಂಟು ಎಂದು ಹೇಳುವರು. ಈ ಕುರುಂಟು ಹುಡುಗಿಯನ್ನು ತುಪ್ಪ ತೆಗೆದುಕೊಂಡು ಹೋಗುವಾಗ ಏನಾದರೊಂದು ಉಡುಗೊರೆಯನ್ನು ಕೊಟ್ಟು ತಮ್ಮೊಂದಿಗೆ ಕರೆದುಕೊಂಡು ಹೋಗುವುದು. ವಧುವಿನ ಮನೆಗೆ ತಲುಪಿದಾಗ ಬಹಳಷ್ಟು ಜಾಗ್ರತೆ ವಹಿಸುವುದು. ಕಾರಣ ಅವಳು ಮನೆ ಸೇರುವುದಕ್ಕೆ ಮುಂಚಿತವಾಗಿ ತಪ್ಪಿಸಿಕೊಂಡರೆ, ನಮ್ಮ ಸಂಗಾತಿ ಹುಡುಗಿಯನ್ನು ಏನು ಮಾಡಿದ್ದೀರಿ ಅಥವಾ ಏಕೆ ಕರೆತರಲಿಲ್ಲ ಎಂದೂ, ಕೂಡಲೇ ತಂದೊಪ್ಪಿಸಬೇಕೆಂದು ಇಲ್ಲದಿದ್ದಲ್ಲಿ ತಪ್ಪುಕಟ್ಟಿ ನಾವೇ ಕರೆ ತರುವುದಾಗಿಯೂ ಭಾವಮೈದುನರು, ಅತ್ತಿಗೆ ನಾದಿನಿಯರು, ಮದುವಣ್ಣನಿಗೆ, ತಮಾಷೆ ಮಾಡುವುದಕ್ಕಾದರೂ ಸವಾಲು ಹಾಕುತ್ತಾರೆ.

**ಕೋಣೆಗೆ ಕೂಡಿಸುವ ಕ್ರಮ :**

ವರನ ಕೋಣೆಯನ್ನು ಅಂದವಾಗಿ ಅಲಂಕರಿಸಿ, ಕೋಣೆಯ ಒಳಗೆ ಹಾಲು ಹಣ್ಣು, ತಾಂಬೂಲ, ಎಲೆ ಅಡಿಕೆ, ಎಣ್ಣೆ ಚರಕಿನಲ್ಲಿ ಎಣ್ಣೆ,ಒಂದುಬೋಗುಣಿಯಲ್ಲಿ ನೀರು ಇಟ್ಟಿರಬೇಕು. ವಧುವಿನ ಮನೆಯಿಂದ ಕೊಟ್ಟ ಉಡುಗೊರೆ ಸಾಮಾನಿನ ಪೆಟ್ಟಿಗೆ [ಅದರಲ್ಲಿ ಬಿಸ್ಕತ್ತು ಇದೆ] ಕೂಡ ವರನ ಕೋಣೆಯಲ್ಲಿ ಇಡುವುದು. ನಾಗೋಳಿ ಶಾಸ್ತ್ರ ಕಳೆದ ಸಂಜೆ ವರನು ಅವನ ಕೋಣೆಯನ್ನು ಮುಂಚಿತವಾಗಿ ಸೇರುವುದು. ವಧುವನ್ನು ವರನ ಅಕ್ಕತಂಗಿಯರು ಕರೆತಂದು ವಧುವಿನ ಕಿವಿಯಲ್ಲಿ ಪಿಸುಮಾತನ್ನು ಹೇಳಿ, ಕೋಣೆಗೆ ಕಳುಹಿಸುವರು. ಕೋಣೆಗೆ ಬಂದ ವಧುವು ಹರ್ಷಭರಿತವಾದ ನಗುಮೊಗದಿಂದ ಹಾಲು ಹಣ್ಣನ್ನು ಮತ್ತು ಪೆಟ್ಟಿಗೆಯಲ್ಲಿರುವ ಬಿಸ್ಕತ್ತನ್ನು ಪತಿಗೆ ಕೊಟ್ಟು ತಾನು ಸೇವಿಸಿ, ವಿಳ್ಯ ಹಚ್ಚಿ ಮಡಚಿ ಪತಿಗೆ ಕೊಟ್ಟು ಚೆಂಬಿನಲ್ಲಿದ್ದ ನೀರನ್ನು ತೆಗೆದುಕೊಂಡು ಬೋಗುಣಿ ಇಟ್ಟುಪತಿಯ ಪಾದ ತೊಳೆದು ವಸ್ತ್ರದಿಂದ ಪಾದ ಒರೆಸಿ ತಲೆಗೂ ಪಾದಕ್ಕೂ ಎಣ್ಣೆ ಹಾಕಿ ಪತಿಯನ್ನು ಸಂತೋಷದಿಂದ ಆದರಿಸಿ ಪತಿಯೊಡನೆ ಶಯನ ಸುಖದಲ್ಲಿ ಪಾಲ್ಗೊಂಡು ತಮ್ಮ ಸ್ಮರಣೀಯ ಮೊದಲ ರಾತ್ರಿಯನ್ನು ಕಳೆಯುವುದು. ಅರುಣೊದಯಕ್ಕೆ ಮುಂಚಿತವಾಗಿ ಸತಿಯು ಎದ್ದು ಹೋಗುವಾಗ ಪತಿಯ ಪಾದ ಮುಟ್ಟಿನಮಸ್ಕರಿಸಿ ತನ್ನ ಪ್ರಾತಃ ವಿಧಿಗಳಲ್ಲಿ ತೊಡಗುವುದು

[ಮುಂದುವರೆಯುವುದು]

ಕೃಪೆ :
**ಗೌಡ ಸಂಸ್ಕೃತಿ ಕುಟುಂಬ ಕೈಪಿಡಿ**

# ಮದುವೆ ಮತ್ತು ಮದ್ಯಪಾನ

'ಮದುವೆ ಮತ್ತು ಮದ್ಯಪಾನ'ಎಂಬ ಈ ತಲೆಬರಹ ನಿಮ್ಮಲ್ಲನೇಕರ ಕುತೂಹಲ ಕೆರಳಿಸಿರಬಹುದು. ನಾನು ಹೇಳಹೊರಟಿರು ವುದು ಕೆಲವು ಜನಾಂಗಗಳಲ್ಲಿ ನಡೆಯುವ ಮದುವೆ ಸಮಾರಂಭ ಮತ್ತು ಆ ಸಂದರ್ಭ ದಲ್ಲಿ ನಡೆಯುವ ಮದ್ಯಪಾನದ ಬಗ್ಗೆ.

ನಮ್ಮ ಜನಾಂಗವೂ ಸೇರಿದಂತೆ ಕೆಲವು ಜನಾಂಗಗಳ ಮದುವೆ ಇತ್ಯಾದಿ ಸಮಾರಂಭ ಗಳಲ್ಲಿ ಮದ್ಯದ ಬಳಕೆ ಇಂದು ಸಾಮಾನ್ಯ ವಾಗಿದೆ. ಮಾತ್ರವಲ್ಲದೆ ಅದನ್ನು ಸಮಾ ರಂಭದ ಅವಿಭಾಜ್ಯ ಅಂಗವೆಂದೇ ಪರಿಗಣಿ ಸುವ ಪರಿಸ್ಥಿತಿ ಬಂದಿದೆ. ವಿಜ್ಞಾನದ ಪ್ರಕಾರ ಮದ್ಯಪಾನ ಆರೋಗ್ಯಕ್ಕೆ ಹಾನಿ ಕರ. ಮದ್ಯ ಸೇವಿಸುವವರನ್ನು ನಮ್ಮ ಸಮಾಜದಲ್ಲೂ ಕೀಳಾಗಿ ಪರಿಗಣಿಸಲಾಗು ತ್ತಿದೆ. ಇಷ್ಟಾದರೂ ಇಂದು ಮದ್ಯದ ಬಳಕೆ ದಿನದಿಂದ ದಿನಕ್ಕೆ ಹೆಚ್ಚುತ್ತಿದೆ.

ಮದುವೆಯಲ್ಲಿ ಮದ್ಯದ ಬಳಕೆಯನ್ನು ಗಂಭೀರವಾಗಿ ಪರಿಗಣಿಸಬೇಕಿಲ್ಲ. ಆದರೆ ಮದ್ಯದ ವಿಪರೀತ ಬಳಕೆಯಿಂದುಂಟಾಗುವ ಪರಿಣಾಮಗಳನ್ನು ಮಾತ್ರ ಗಂಭೀರವಾಗಿ ಪರಿಗಣಿಸಲೇಬೇಕಾಗುತ್ತದೆ. ಇಲ್ಲದೇ ಹೋದರೆ ಮದುವೆಗೆಂದು ಬಂದವರು ಯುದ್ಧಭೂಮಿಯನ್ನು ವೀಕ್ಷಿಸಬೇಕಾದ ಪ್ರಸಂಗ ಬರಬಹುದು, ಬರುತ್ತಿದೆ.

ನಾನು ಗಮನಿಸಿದ ಪ್ರಕಾರ ಕೆಲವು ಜನರು ಮದ್ಯಪಾನ ಮಾಡಬಹುದೆಂಬ ಉದ್ದೇಶದಿಂದಲೇ ಮದುವೆಗೆ ಬರುತ್ತಾರೆ. "ಹುಚ್ಚುಮುಂಡೆ ಮದುವೆಯಲ್ಲಿ ಉಂಡ ವನೇ ಜಾಣ" ಎಂಬ ಗಾದೆ ಮಾತಿನಂತೆ 'ಮದುವೆ ಯಾರಾದಾದರೇನು ? ಹೆಂಡ ಸಿಕ್ಕಿದರೆ ಸಾಕು' ಎಂಬ ತತ್ವವನ್ನು ಹೆಚ್ಚಿನ ಜನರು ಸ್ವೀಕರಿಸಿರುವಂತೆ ಕಾಣುತ್ತದೆ. ವಿಷಾದದ ಸಂಗತಿಯೆಂದರೆ ಯುವಜನರು ಹೆಂಡದ ಹುಚ್ಚನ್ನು ಬೆಳಸಿಕೊಂಡಿರುವುದು.

ಮದುವೆಯಲ್ಲಿ ಮದ್ಯವನ್ನು ಸ್ವೀಕರಿಸು ವವರನ್ನು ಕೀಳಾಗಿ ಕಾಣಬೇಕಿಲ್ಲ. ಆದರೆ ಮಿತಿಮೀರಿ ಮದ್ಯಪಾನ ಮಾಡಿ ಮದುವೆ ಸಮಾರಂಭವನ್ನೇ ಅಸ್ತವ್ಯಸ್ತಗೊಳಿಸುವ ಅವಿವೇಕಿಗಳನ್ನು ಮಾತ್ರ ತೀವ್ರವಾಗಿ ಖಂಡಿಸಲೇ ಬೇಕಾಗುತ್ತದೆ. "ಕೋತಿ ತಾನು ಕೆಡುವುದಲ್ಲದೆ ಇಡೀ ವನವನ್ನೇ ಕೆಡಿಸಿತು" ಎಂಬ ಗಾದೆ ಮಾತಿನಂತೆ ಇಂತಹವರು ತಮ್ಮ ಮಾನಮರ್ಯಾದೆ ಕಳೆದುಕೊಳ್ಳುವುದರ ಜೊತೆಗೆ ಸಮಾರಂಭದ ಸೊಬಗನ್ನೇ ಹಾಳು ಮಾಡುತ್ತಾರೆ.

ಬಂದ ಆಹ್ವಾನಿತರಿಗೆ ಬೇಕಾಬಿಟ್ಟಿ ಮದ್ಯವನ್ನು ನೀಡಿದರೆ ತಮ್ಮ ಪ್ರತಿಷ್ಠೆ ಹೆಚ್ಚುತ್ತದೆ ಎಂದು ಕೆಲವರು ತಿಳಿದು ಕೊಂಡಿದ್ದಾರೆ. ಇದು ನಿಜವಾಗಿಯೂ ತಪ್ಪು ತಿಳುವಳಿಕೆ. ಆಹ್ವಾನಿತರಿಗೆ ನಿರ್ದಿಷ್ಟ ಪ್ರಮಾಣದಲ್ಲಿ [ದೇಹದ ಮತ್ತು ಮನಸ್ಸಿನ ಮೇಲೆ ನಿಯಂತ್ರಣ ಉಳಿಸಿಕೊಳ್ಳುವ ಮಟ್ಟ] ಮದ್ಯವನ್ನು ಒದಗಿಸಿದರೆ ಅದರಿಂದ ಆಹ್ವಾನಿತರನ್ನು ತೃಪ್ತಿಪಡಿಸಿದಂತಾಗುತ್ತದೆ ಮಾತ್ರವಲ್ಲದೆ ಸಮಾರಂಭದ ಸೌಂದರ್ಯ ವನ್ನೂ ಉಳಿಸಿಕೊಂಡಂತಾಗುತ್ತದೆ. ಇಲ್ಲದೇ ಹೋದರೆ"ಮಾಡಿದ್ದುಣ್ಣೋ ಮಹಾರಾಯ" ಎಂಬ ಗಾದೆಯ ಅರ್ಥವನ್ನು ಆಹ್ವಾನಿಸಿದ ವ್ಯಕ್ತಿ ತಿಳಿದುಕೊಳ್ಳುವ ಸಂದರ್ಭ ಉಂಟಾ ಗುತ್ತದೆ.

ಆಹ್ವಾನಿಸಲ್ಪಟ್ಟವರು ಕೂಡಾ ಮದುವೆ ಸಮಾರಂಭಗಳಲ್ಲಿ ಮಿತ ಪ್ರಮಾಣದಲ್ಲಿ ಮದ್ಯ ಸೇವನೆ ಮಾಡಬೇಕು. ಮಿತಿಮೀರಿ ಕುಡಿದರೆ ತಮ್ಮ ಮಾನಮರ್ಯಾದೆಯನ್ನು ಕಳೆದುಕೊಳ್ಳುವ ಪರಿಸ್ಥಿತಿ ಉಂಟಾಗುವ ಸಾಧ್ಯತೆಗಳೇ ಹೆಚ್ಚು.

ಕೆಲವರು ಸಾಕಷ್ಟು ಮದ್ಯಪಾನ ಮಾಡಿ ಮದುವೆ ಸಮಾರಂಭದ ಸ್ಥಳದಿಂದ ದೂರ ದಲ್ಲಿ ಇಸ್ಪೀಟು ಆಡುವುದರಲ್ಲಿ ಮಗ್ನರಾಗಿ ರುತ್ತಾರೆ. ಇಂತವರು ಮದುವೆಗೆ ಬಂದಿರುವ ಉದ್ದೇಶವಾದರೂ ಏನು? ಇಂತವರಿಗೆ ಮದ್ಯ ಪಾನ ಮಾಡಲು ಮತ್ತು ಇಸ್ಪೀಟು ಆಡಲು ಮದುವೆ ಸಮಾರಂಭ ಒಂದು ನೆಪ ಮಾತ್ರ. ಇನ್ನು ಕೆಲವರು ಮದ್ಯಪಾನ ಮಾಡಿ ಮದುವೆಗೆ ಬಂದಿರುವ ಹುಡುಗಿಯರ ಹಿಂದೆ ಓಡಾಡುತ್ತಿರುತ್ತಾರೆ. ಇಂತವರು ತಮ್ಮ ಮರ್ಯಾದೆ ಕಳೆದುಕೊಳ್ಳುವುದರ ಜೊತೆಗೆ ಮನೆತನದ ಮರ್ಯಾದೆಯನ್ನು ಹಾಳು ಮಾಡಿಬಿಡುತ್ತಾರೆ. ಮತ್ತೆ ಕೆಲವರು ಮದುವೆ ಯಲ್ಲಿ ವಿಪರೀತ ಮದ್ಯಪಾನ ಮಾಡಿಕೊಂಡು ತಮಗಾಗದವರ ಬರವನ್ನೇ ಕಾಯುತ್ತಾ, ಅವರು ಬಂದ ತಕ್ಷಣ ವಿನಾ ಕಾರಣ ಜಗಳ ತೆಗೆದು ಮದುವೆ ಸಮಾರಂಭವನ್ನು ಯುದ್ಧ ಭೂಮಿಯಾಗಿ ಬದಲಾಯಿಸುತ್ತಾರೆ. ಕೆಲವರು ಖಾಲಿ ಬಾಟಲಿಯನ್ನು ತಂದು ಮದ್ಯ ತುಂಬಿದ ಗ್ಲಾಸುಗಳಿಂದ ತಮ್ಮ ಬಾಟಲಿಯನ್ನು ಸ್ವಲ್ಪಸ್ವಲ್ಪವೇ ತುಂಬಿಸಿ ಕೊಳ್ಳುವುದನ್ನು [ಯಾರಿಗೂ ಕಾಣದಂತೆ] ನಾನು ಗಮನಿಸಿದ್ದೇನೆ. ಇದು ಮನುಷ್ಯನ ಅಲ್ಪತನವನ್ನು ಪ್ರದರ್ಶಿಸುತ್ತದೆ.

ಕೊನೆಯದಾಗಿ ಹೇಳುವುದಿಷ್ಟೇ. ಮದುವೆ ಸಮಾರಂಭಗಳಲ್ಲಿ ಮದ್ಯದ ಸೇವನೆ ಇದ್ದರೆ ಇರಲಿ, ತೊಂದರೆಯಿಲ್ಲ. ಆದರೆ ತೊಂದರೆ ಯುಂಟು ಮಾಡುವಷ್ಟರ ಮಟ್ಟಿಗೆ ಮದ್ಯ ಸೇವನೆ ಮಾತ್ರ ಬೇಡವೇ ಬೇಡ.

● ಬೈತಡ್ಕ ಕೆ. ಶ್ರೀಧರ್

---

## ಸೂರ್ಯ ಮುಳುಗದ ನಾಡು

ಒಂದು ಕಾಲದಲ್ಲಿ ಇಂಗ್ಲೀಷರು ಪ್ರಪಂಚದ ಪ್ರತಿಯೊಂದು ದೇಶವನ್ನು ತಮ್ಮ ಹಿಡಿತ ದಲ್ಲಿ ಇಟ್ಟುಕೊಂಡು ಅಧಿಕಾರದಿಂದ ಮೆರೆ ದರು. ಅವರಿಗೆ ಕತ್ತಲೆ ಎಂಬುವುದೇ ಇರ ಲಿಲ್ಲ. ಅಂದರೆ, ಅವರು ಆಳುತ್ತಿದ್ದ ಒಂದು ದೇಶದಲ್ಲಿ ಸೂರ್ಯ ಮುಳುಗಿದ್ದರೆ, ಇನ್ನೊಂದು ದೇಶದಲ್ಲಿ ಉದಯವಾಗಿರು ತ್ತಿದ್ದ, ಯಾವುದಾದರೂ ಒಂದು ದೇಶದಲ್ಲಿ ಬೆಳಕು ಇದ್ದೇ ಇರುತ್ತಿತ್ತು. ಆದ್ದರಿಂದಲೇ ಇಂದು ಇಂಗ್ಲ್ಯಾಂಡ್ (ಬ್ರಿಟಿಷ್]ದೇಶಕ್ಕೆ "ಸೂರ್ಯ ಮುಳುಗದ ನಾಡು" ಎಂಬ ಹೆಸರು ಬಂದಿದೆ.

ಪಡಿಕಲ್ ಪುಷ್ಪಾ ಮಾಚಯ್ಯ
ಬೆಂಗಳೂರು

# ಗೌಡಕೇಸರಿ ನಿಡ್ಯಮಲೆ ಮುದ್ದಪ್ಪನವರ ಜೀವನ ಚರಿತ್ರೆ

[ಭಾಗ – ೨]

**ಕೊ**ಡಗು ಕೇಂದ್ರಾಡಳಿತದಲ್ಲಿ 'ಸಿ' ಸ್ಟೇಟ್ ಎಂದು ಪರಿಗಣಿತವಾಗಿದ್ದ ಕಾಲದಲ್ಲಿ ಎನ್. ಮುದ್ದಪ್ಪನವರು ಮಡಿಕೇರಿಯಲ್ಲಿ ಸೆಷನ್ಸ್ ನ್ಯಾಯಾಧೀಶರಾಗಿದ್ದರು. ಅವರು ನನ್ನ ಹುಟ್ಟೂರಾದ ಪೆರಾಜೆ ಗ್ರಾಮದಲ್ಲಿ ಜನ್ಮ ತಾಳಿದವರು. ಅವರ ತಮ್ಮ ಸೋಮಣ್ಣನವರು ಕೊಡಗಿನಲ್ಲಿ ಪ್ರಸಿದ್ಧ ವಕೀಲರಾಗಿದ್ದು ಮತ್ತು ಕೊಡಗಿನ ಪ್ರತಿನಿಧಿಯಾಗಿ ಆಯ್ಕೆಗೊಂಡು ಪಾರ್ಲಿಮೆಂಟಿನ ಸದಸ್ಯರಾಗಿದ್ದರು. ನಮ್ಮ ಬಾಲ್ಯ ಕಾಲದಲ್ಲಿ ಈ ಅಣ್ಣ ತಮ್ಮಂದಿರನ್ನು ನೋಡಿದಾಗಲೆಲ್ಲ, ಅವರ ಹಿಮಾಲಯ ಸದೃಶ ವ್ಯಕ್ತಿತ್ವ ನಮ್ಮ ಮನಸ್ಸಿನಲ್ಲಿ ಭಯ, ಅಭಿಮಾನ, ಗೌರವ, ವಿಸ್ಮಯಗಳನ್ನು ಮೂಡಿಸುತ್ತಿತ್ತು. ಅಂದಿನಿಂದ ಇಂದಿನವರೆಗೆ ಅವರನ್ನು ನೆನಸಿಕೊಂಡರೆ ಮನಸ್ಸು ತೀರ್ಥಸ್ನಾನ ಮಾಡಿದರೆ ಆಗುವ ಸಂತೋಷ ಮತ್ತು ಸೌಖ್ಯವನ್ನು ಅನುಭವಿಸುತ್ತದೆ.

ನಮ್ಮ ಪೆರಾಜೆ ಗ್ರಾಮ ಆಗ ಅದರಂತೆಯೇ ಇದ್ದ ಇತರ ಎಲ್ಲ ಹಳ್ಳಿಗಳಂತೆ ಬಹಳ ಹಿಂದುಳಿದ ಪ್ರದೇಶವಾಗಿತ್ತು. 365 ದಿನ ದುಡಿದರೂ ಹೆಚ್ಚೆಂದರೆ 300 ದಿನಗಳನ್ನು ನಿಭಾಯಿಸಲು ಸಾಧ್ಯವಾಗುವಂತಿತ್ತು. – ಹಲವು ಕುಟುಂಬಗಳಿಗೆ, ದೇವಸ್ಥಾನದ ಆವರಣದೊಳಗಿನ ಒಂದು ಜೋಪಡಿ ಕಟ್ಟಡದಲ್ಲಿ, ಒಬ್ಬರೇ ಉಪಾಧ್ಯಾಯರಿರುವ ನಾಲ್ಕನೇ ತರಗತಿಯ ವರೆಗಿನ ಶಾಲೆ. ಇದು ಗ್ರಾಮದ ಅಂಚಿನಲ್ಲಿದ್ದು, ನಾಲ್ಕೈದು ಮೈಲು ದೂರದ ಇನ್ನೊಂದು ಅಂಚಿನಲ್ಲಿರುವವರ ಮಕ್ಕಳು ಈ ಶಾಲೆಗೆ ಬರಬೇಕಾದರೆ ತುಂಬ ಕಷ್ಟದ ಪರಿಸ್ಥಿತಿಯಲ್ಲಿ, ಓದು ಬರಹ ಕಲಿಯುವವರ ಸಂಖ್ಯೆ ಆಗ ಅತಿವಿರಳ.

ಈ ಶಾಲೆಯಲ್ಲಿ ನಾವು ಓದುತ್ತಿರುವಾಗ ಶ್ರೀ ಮುದ್ದಪ್ಪನವರನ್ನು ದೂರದಿಂದ ನೋಡುವ ಅವಕಾಶ ನಮಗೊದಗುತ್ತಿತ್ತು. ಅವರು ವಾರಕ್ಕೊಮ್ಮೆ, 2-3 ವಾರಕ್ಕೊಮ್ಮೆ ತಮ್ಮ ಆಸ್ತಿಪಾಸ್ತಿಯ ಮೇಲ್ವಿಚಾರಣೆಗೆ ಬರುತ್ತಿದ್ದರು. ಹೊಳೆ ತುಂಬಿದ ಕಾಲದಲ್ಲಿ ನಮ್ಮ ಶಾಲೆಯಿಂದ ಕೆಳಗಿದ್ದ ದೋಣಿ ಕಡವಿನಲ್ಲಿ ದೋಣಿ ದಾಟಿ, ನಡಕೊಂಡು ಬರುತ್ತಿದ್ದರು ಹನವಾದ ಎತ್ತರ, ತೋರ, ಕೋಟು ಧರಿಸಿ, ತಲೆಗೆ ಹ್ಯಾಟು ಸಿಕ್ಕಿಸಿ, ಬಿರುಸುನಡೆಯಲ್ಲಿ ಬರುತ್ತಿದ್ದರು. ಅವರ ಮುಖದಲ್ಲಿಒಂದು ದೃಢತೆಯ ಕಳೆ ಇರುತ್ತಿತ್ತು. ದೂರದ ಅವರ ತೋಟಕ್ಕೆ, ಕಾಡು ಮೇಡಿನ, ಏರಿಳಿತದ ದಾರಿಯಲ್ಲಿ ಹೋಗಿ ಬರುತ್ತಿದ್ದರು. ಒಮ್ಮೆ ನಮ್ಮ ಊರಿನ ಜಾತ್ರೆಗೆ ಪತ್ನಿ, ಪುತ್ರರೊಡನೆ ಬಂದಾಗ ವಾದ್ಯ ಮೇಳದೊಡನೆ ಊರಿನ ಮುಖಂಡರು ಅವರನ್ನು ದೇವಸ್ಥಾನಕ್ಕೆ ಕರೆತಂದರು. ಬಹುಶಃ ಇದೊಂದೇ ಅವರಿಗೆ ನಮ್ಮೂರಿನಲ್ಲಿ ಸಂದ ಗೌರವವೆನ್ನಬೇಕು. ಉಳಿದ ಎಲ್ಲ ಸಂದರ್ಭಗಳಲ್ಲಿ ಅವರು ಅಷ್ಟು ದೊಡ್ಡ ಹುದ್ದೆಯಲ್ಲಿದ್ದರೂ, ಎಲ್ಲರೊಡನೆ ಒಂದಾಗಿ ಬೆರೆಯುತ್ತಿದ್ದರು. ನಗು, ಹಾಸ್ಯಗಳನ್ನು ಚೆಲ್ಲುತ್ತಿದ್ದರು. ಅವರು ಬರುವಾಗ ದಾರಿಯಲ್ಲಿ ಚಿಕ್ಕ ಹುಡುಗರಾದ ನಾವೆಲ್ಲಾದರೂ ಸಿಕ್ಕಿದರೆ, ನಾವು ಹೆದರಿ ಹೆದರಿ ನಮಸ್ಕರಿಸಿದರೆ, ಅವರು ಮಲ್ಲಿಗೆ ನಗೆ ಸೂಸಿ, ಮುಂದೆ ಹೋಗುತ್ತಿದ್ದರು.

ಅವರು ಚಿಕ್ಕ ಹುಡುಗರಾಗಿದ್ದಾಗ, ಕಲಿಯುವ ಆಸೆಯಿಂದ ಮನೆ ಬಿಟ್ಟು ಮಡಿಕೇರಿಗೆ ಓಡಿ ಹೋಗಿದ್ದರು. ಮುಂದೆ ಶಾಲೆಗೆ ಸೇರಿ ಕಲಿತು, ದೊಡ್ಡ ಪದವಿಯನ್ನು ಪಡೆದರು. ಹಾಗೆ, ಹೀಗೆ ಎಂದೆಲ್ಲ ನಮ್ಮ ಹಿರಿಯರು ಅವರ ಬಗ್ಗೆ ನಮಗೆ ಕತೆ ಹೇಳುವಂತೆ ಹೇಳುತ್ತಿದ್ದರು. ನಮಗೆ ಅದೊಂದು ಪವಾಡದಂತೆ ಕಂಡರೂ, ಅದರ ನಿಜಾಂಶ ಏನೆಂದು ಇಂದಿಗೂ ತಿಳಿಯದಿದ್ದರೂ, ಆಶ್ಚರ್ಯವಾಗುತ್ತಿತ್ತು – ಈ ಶಾಲೆಯ ಪೀಕಲಾಟವನ್ನು ಆಸೆ ಪಡುವವರೂ ಇದ್ದಾರೆಯೇ ? ಎಂದು. ಅವರೂ ವಿದ್ಯೆ ಕಲಿಯುವುದು ಎಂದರೆ ಏನನ್ನೋ ಸಾಧಿಸಲಿರುವಂಥ ಸಾಹಸ ಎಂಬ ಅರಿವೂ ಮನಸ್ಸಿಗಾಗುತ್ತಿತ್ತು. ಒಡನೆಯೇ ನಾವು ಅಂದಿದ್ದ ಪರಿಸ್ಥಿತಿಯಲ್ಲಿ ನಮ್ಮಂಥ ಸಾಮಾನ್ಯರಿಂದ ಅದೆಲ್ಲ ಆಗುವ ಕೆಲಸವಲ್ಲ ಎಂದೂ ನಿರಾಶೆಯ ಸುಳಿ ಸುತ್ತುತ್ತಿತ್ತು. ಆದರೆ ಯಾವ ದೈವವಿಲಾಸವೋ ಏನೋ ? ಹೆಜ್ಜೆಹೆಜ್ಜೆಯಾಗಿ ನಾನೂ ವಿದ್ಯಾಕ್ಷೇತ್ರದಲ್ಲಿ ಮೇಲೇರಿ ದೊಡ್ಡ ಪದವಿಯನ್ನೂ

○ ಪ್ರೊ. ಕೆ. ಕುಶಾಲಪ್ಪಗೌಡ

ಪಡೆದೆ, ದೊಡ್ಡ ಹುದ್ದೆಯನ್ನೂ ಪಡೆದೆ ಎಂಬ ಸಂತೃಪ್ತಿಯೊಡನೆ, ಈ ಕಾಲದಲ್ಲಿ ಅಂದರೆ ನನ್ನ ಪ್ರಗತಿ ಪಥವನ್ನು ಅವರಿಗೆ ನಿವೇದಿಸುವ ಮೊದಲೇ ಅವರು ಇಲ್ಲವಾದರಲ್ಲ! ಇದ್ದಿದ್ದರೆ ಅವರು ಎಷ್ಟು ಸಂತೋಷಿಸುತ್ತಿದ್ದರು ! ಎಂದು ಖೇದದಿಂದ ನೆನೆಯುತ್ತೇನೆ. ಇಂದೂ ಸಮಾಜದಲ್ಲಿ ಉನ್ನತ ಪದವಿ ಮತ್ತು ಹುದ್ದೆಗಳನ್ನು ಪಡೆದವರಿದ್ದಾರೆಂಬುದು ಹೆಮ್ಮೆಯ ವಿಷಯವಾಗಿದೆ.

ನಮ್ಮ ಗೌಡ ಸಮಾಜದಲ್ಲಿ ದಿ|| ಮುದ್ದಪ್ಪನವರ ಕಾಲದಲ್ಲಿ ಪದವೀಧರರಾಗಿದ್ದವರು ಕೇವಲ ಬೆರಳೆಣಿಕೆಯಷ್ಟು ಜನರು. ಸ್ನಾತಕೋತ್ತರ ಪದವಿ ಪಡೆದವರು ಇಲ್ಲವೇ ಇಲ್ಲ ಎಂಬ ಸ್ಥಿತಿಯಲ್ಲಿತ್ತು. ನಮ್ಮವರು ವಿದ್ಯಾವಂತರಾಗಬೇಕು ಎಂಬ ಕಳಕಳಿ ಆಗಿನ ನಮ್ಮ ಸಮಾಜದ ಹಿರಿಯರಿಗೆ ತೀವ್ರವಾಗಿದ್ದಂತೆ ಮುದ್ದಪ್ಪನವರೂ ಕೊಡಗಿನ ಗೌಡ ಸಮಾಜದ ಸಂಘ ಚಟುವಟಿಕೆ ಹೆಚ್ಚಾಗುವಂತೆ ದುಡಿಯುತ್ತಿದ್ದರು. ಮಡಿಕೇರಿಯಲ್ಲಿ ಗೌಡ ವಿದ್ಯಾರ್ಥಿಭವನದ ಸ್ಥಾಪನೆ ಮತ್ತು ಅದರ ಅಭಿವೃದ್ಧಿಗೆ ಸತತ ಹೆಣಗುತ್ತಿದ್ದರು. ಅದರ ಆರಂಭಕಾಲದಲ್ಲಿ ಸಾಕಷ್ಟು ವಿದ್ಯಾರ್ಥಿಗಳ ಸಂಖ್ಯೆ ಇಲ್ಲವೆಂದಾಗ ತಮ್ಮ ಮಗನನ್ನೇ ಆ ವಿದ್ಯಾರ್ಥಿಭವನಕ್ಕೆ ಸೇರಿಸಿದ್ದರೆಂದು ಕೇಳಿದ್ದೇನೆ.

[ಮುಂದುವರೆಯುವುದು]

## ಆಸೆ

**ಮಾ**ನವನು ಇಂದು ಪೂರ್ಣವಾಗಿ ಸ್ವಾರ್ಥದಲ್ಲಿ ಮುಳುಗಿದ್ದಾನೆ. ಸ್ವಾರ್ಥ ಆಸೆಯ ಫಲ. ಆಸೆ ಎಂದರೆ ಒಳ್ಳೆಯದೂ ಇದೆ, ದುರಾಸೆಯೂ ಇದೆ. ನನಗೆ ಯಾವುದು ಬೇಕು.ಎಷ್ಟು ಬೇಕು, ಏಕೆ ಬೇಕೆಂಬುವದರ ಪರಿವಿಲ್ಲ. ಕಂಡದ್ದೆಲ್ಲಾ ಬೇಕು. ಬೇಕು ಎಂಬುದ್ದಕ್ಕೆಸಾಕು ಎಂಬುದಿಲ್ಲ.ಈ ಸಾಕು ಬೇಕುವಿನ ಜಂಜಾಟದಲ್ಲಿ ನಾವು ಸೋಲುತ್ತೇವೆ.

ತನಗೆ ಜೀವನದಲ್ಲಿ ಜೀವಿಸಿ ಕೊಳ್ಳುವುದಕ್ಕೆ ಎಷ್ಟು ಬೇಕೆಂಬುದೊಂದಾಸೆ. ತನ್ನ ಮಕ್ಕಳಿಗೆ, ಮರಿಮಕ್ಕಳಿಗೆ ಏನೆಲ್ಲಾ ಬೇಕು, ಎಷ್ಟುಬೇಕು, ಅದರ ಸಂಪಾದನೆ ಹೇಗೆ ಎಂಬ ಆಸೆ.ಹೀಗೆ ಆಸೆಗಳ ಪಾಶದಲ್ಲಿ ನಾವು ಮೋಸ ಹೋಗುತ್ತೇವೆ.ಆ ಮೋಸವೇ ನಮ್ಮನ್ನು ಆವರಿಸುವ ಚಿಂತೆ. ಜ್ಞಾನಿಗಳು ಹೇಳುತ್ತಾರೆ. ಚಿಂತೆಯೇ ಚಿತೆ. ಆದರೆ ಚಿಂತೆ ಗೊತ್ತಿಲ್ಲದ ಹಾಗೆ ಗೊತ್ತು ಮಾಡದೆ ನಿಧಾನವಾಗಿ ಬೇಯಿಸುತ್ತದೆ. ಚಿತೆ ಎಲ್ಲರಿಗೂ ಕಾಣುವ ಹಾಗೆ ಒಮ್ಮೆಲೆ ಬೇಯಿಸುತ್ತದೆ.ಆಸೆ ಇದ್ದರೂ ಇಲ್ಲದಿದ್ದರೂ ಚಿಂತೆ ಇದ್ದೆ ಇರುತ್ತದೆ ಆಸೆ ಇಲ್ಲದಷ್ಟು ಚಿಂತೆ ಕಡಿಮೆಯಾಗುತ್ತದೆ.ಅಂದರೆ ಆಸೆ ಬೇಕು, ಮಿತಿ ಇರಬೇಕು. ಮಿತಿಯಲ್ಲಿ ಗತಿ ಕಾಣಬಹುದು, ಕಾಣಬೇಕು.

ಪ್ರಾಣಿಗಳಿಗೆ ಆಸೆ ಇಲ್ಲ. ಜೀವನದಲ್ಲಿ ಪ್ರೀತಿ ಇದೆ. ತನ್ನ ಆಹಾರ, ತನ್ನ ಕಕ್ಷಣೆ, ತನ್ನ ಸಂಸಾರದಲ್ಲಿ ಪ್ರೀತಿ ಇದೆ. ಮೋಹವಿಲ್ಲಾ. ಪ್ರಾಪಂಚಿಕ ಸುಖ ಮಾತ್ರ. ಆದರೆ ಮಾನವನಿಗೆ ಬುದ್ಧಿ ಇದೆ, ಜ್ಞಾನ ಇದೆ, ವಿಜ್ಞಾನವನ್ನು ಅರಿಯಬಹುದು. ಜ್ಞಾನಕ್ಕೂ, ವಿಜ್ಞಾನಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ವಿಜ್ಞಾನ ಶೋಧನೆ, ಜ್ಞಾನ ದೈವಾರ್ಜನೆ.ಜ್ಞಾನವಿದ್ದರೆ ವಿಜ್ಞಾನವನ್ನು ಗುರ್ತಿಸಬಹುದು. ವಿಜ್ಞಾನ ಬೇಕು. ಆದರೆ ಅದರ ದಾಸನಾಗಬಾರದು. ವಿಜ್ಞಾನದ ಆಸೆಯಲ್ಲಿ ಸಮಾಜದ ಏಳ್ಗೆ ಕಾಣಬೇಕು.

ಮನುಷ್ಯನು ತನ್ನಲ್ಲಿರುವ ಕ್ರೂರತನವನ್ನು ಬಿಟ್ಟರೆ ಬದುಕುವ ಆಸೆ ನೆರವೇರುತ್ತದೆ. ನಾನು ನಾನೇ ಆಗಬೇಕೆಂಬ ಆಸೆ. ನಾನೇ ನನ್ನ ಜನಾಂಗವಾಗಬೇಕೆಂಬ ಜನಾಂಗದ ಆಸೆ, ಇತರರ ಆಸೆಗೆ ಮಣ್ಣೆರಚಬಾರದೆಂಬ ಆಸೆ. ಇತರರಿಗೆ ಉಪಕಾರ ಮಾಡುವ ಆಸೆ, ಅದು ಸಾಧ್ಯವಿಲ್ಲದಿದ್ದರೆ, ಅಪಕಾರ ಮಾಡಬಾರದೆಂಬ ಆಸೆ ಇರಬೇಕು. ಉಪಕಾರ ಮಾಡಲಿಕ್ಕಾಗದೇ ಹೋದರೆ ಅಪಕಾರ ಖಂಡಿತಾ ಮಾಡುವುದಿಲ್ಲವೆಂಬಾಸೆ ಆಸೆಗಳಲ್ಲಿ ಮಹತ್ವದಾಸೆ. ಅಪಕಾರ ಮಾಡದಿರುವುದೇ ಉಪಕಾರ.

ಒಟ್ಟಿನಲ್ಲಿ ಆಸೆ ನಮಗೆ ಕೆಡುಕಾದ್ದರೂ, ಜನಾಂಗಕ್ಕೆ ನಮ್ಮ ಸಮಾಜಕ್ಕೆಒಳಿತಾಗಬೇಕೆಂಬ ಆಸೆಯೇ ಆಸೆಗಳಲ್ಲಿ ಶ್ರೇಷ್ಠ

○ **ಚೇಂದ್ರಿಮಾಡ ಜಿ. ಮುತ್ತಪ್ಪ**, ಕುಶಾಲನಗರ.

## ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ಶಾಂತಿ ಪಡೆಯ ಬಿಳಿ ಹಿಮದದ್ರಮೇಲೆ
ಹಾರದು ಎಂದೆಂದಿಗೂ
ಶತ್ರುಗಳ ಹಸಿರು ಧ್ವಜ
ಹಾರುವುದೆತ್ತರ ನಮ್ಮ ತ್ರಿವರ್ಣಧ್ವಜ

ಹರಿದರೇನಂತೆ ನಮ್ಮ ನೆತ್ತರ ಪ್ರವಾಹ
ಬಿದ್ದರೇನಂತೆ ಉಲ್ಕೆ, ಬೆಂಕಿ, ಮಳೆ
ಉಟ್ಟರೇನಂತೆ ಚಿಂದಿ, ಹೊಟ್ಟೆಗಿಲ್ಲದಿದ್ದರೇನಂತೆ
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ಜಗ ಪ್ರಳಯವಾಗಲಿ
ಯಾರೇ ಎಸೆಯಲಿ ಅಣುಶಕ್ತಿಯನು
ತಡೆದವು ಅವನ್ನೆಲ್ಲಾ ದೇಶ ಪ್ರೇಮ–ಭಕ್ತಿಯಲಿ
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ಶತ್ರುಗಳಿರಾ ನಿಮ್ಮಲಿದ್ದರೇನಂತೆ ಮಾರಕಾಸ್ತ್ರಗಳು
ಇದ್ದರೇನಂತೆ ಕಪಟ ತಂತ್ರಗಳು
ನಮ್ಮಲಿಲ್ಲವೇ ಗಾಂಡೀವ–ಕೋದಂಡ–
ಪಾಂಚಜನ್ಯಗಳು
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ನಿಮ್ಮಲಿದ್ದರೇನಂತೆ ಬಾಡಿಗೆ ಖಳರು
ನಮ್ಮಲ್ಲಿದೆ ಉಕ್ಕಿನ ಗುಂಡಿಗೆಗಳು
ದೇಶಾಭಿಮಾನದ ಕಲ್ಲಿನ ದೇಹಗಳು
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ಯಾವುದೋ ಕವಿನುಡಿಯಂತೆ
"ಎಲೋ ಖಳನಾಯಕರುಗಳಿರಾ
ನಮ್ಮದೊಂದೊಂದು ಗುರುಪರಶುರಾಮನ ಕೊಡಲಿ
ಹುಲಿ ಹೊಯ್ದ ಸಳ ನಮ್ಮ ನಾಯಕ"
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

ಕಳೆದುಕೊಳ್ಳಲೊಲ್ಲೆವು ತಾಯ ಶಿರವನು
ತಾಯ್ ಭಾರತೀಯ ಶಿರವ,
ನಂದನವನ ಕಾಶ್ಮೀರವನು
ನಾವು ಒಪ್ಪಿಸಲೊಲ್ಲೆವು ತಾಯ ಶಿರವನು

● **ಕಟ್ಟೆಮನೆ ಆರ್. ನವೀನ್**, ಗೋಣಿಕೊಪ್ಪ

# ಅವಂದೂರು ಗೋಪಾಲಕೃಷ್ಣ ರೈತಕೂಟ ಆರಂಭ

**"ಸಾ**ಲ ಕೊಡುವುದು ಬ್ಯಾಂಕಿನ ಕೆಲಸ. ಸಾಲ ಮನ್ನಾ ಮಾಡುವುದು ಬ್ಯಾಂಕಿನ ಕೆಲಸವಲ್ಲ, ಸಾಲ ತೆಗೆದುಕೊಂಡ ರೈತ, ಸಾಲ ತೀರಿಸುವುದು ನನ್ನ ಕರ್ತವ್ಯವೆಂದು ತಿಳಿಯಬೇಕು. ರೈತ ಮತ್ತು ಬ್ಯಾಂಕಿನ ಸಂಬಂಧ ಸ್ನೇಹಿತರಂತೆ ಇರಬೇಕು. ಆಗ ಮಾತ್ರ ತನ್ನ ಆರ್ಥಿಕಾಭಿವೃದ್ಧಿಯನ್ನು ಮಾಡಿಕೊಳ್ಳಬಲ್ಲ"ಎಂದು ಬೆಂಗಳೂರು ನಬಾರ್ಡ್ ಕೇಂದ್ರ ಕಛೇರಿಯ ಸಹಾಯಕ ಮಹಾ ಪ್ರಬಂಧಕ ಡಾ. ಭೀ. ಪ್ರಾಣೇಶ್‌ರಾವ್ ಅವರು ಅವಂದೂರು, ಬೆಟ್ಟತ್ತೂರು, ಕಾರ್‌ಗುಂದ ಮತ್ತು ಹೆರವನಾಡು ಗ್ರಾಮ 'ಶ್ರೀ ಗೋಪಾಲಕೃಷ್ಣ ರೈತ ಕೂಟ'ವನ್ನು ಫೆ. 14ರಂದು ಅವಂದೂರು ಗ್ರಾಮದ ಶ್ರೀ ಗೋಪಾಲಕೃಷ್ಣ ದೇವಾಲಯದಲ್ಲಿ ಉದ್ಘಾಟನೆಯನ್ನು ಮಾಡಿ ಮಾತನಾಡಿದರು.

'ಈ ಗ್ರಾಮಗಳನ್ನು ನಬಾರ್ಡ್ ದತ್ತು ತೆಗೆದುಕೊಂಡು ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸುತ್ತಿದೆ. ಇದಕ್ಕೆ ನಿಮ್ಮ ಸಹಕಾರ ಬೇಕು.ರೈತಕೂಟದ ನಿಯಮ, ಕಾರ್ಯವ್ಯಾಪ್ತಿಯನ್ನು ವಿವರಿಸಿ, ಇದರ ಉಪಯೋಗ ರೈತನ ಆರ್ಥಿಕ, ಸಾಮಾಜಿಕ ಪ್ರಗತಿಗೆ ದಾರಿಯಾಗುತ್ತದೆ' ಎಂದರು.

ಮುಖ್ಯ ಅತಿಥಿಗಳಾದ ಮಡಿಕೇರಿ ನಬಾರ್ಡ್ ಶಾಖೆಯ ಸಹಾಯಕ ಪ್ರಬಂಧಕರಾದ ಯು. ಎಸ್. ಪ್ರಭು ಮಾತನಾಡಿ ಇದು ಸಾಲ ಕೂಟದ ಸಂಸ್ಥೆ, ನಿಮ್ಮ ಸಹಾಯ ಸ್ಫೂರ್ತಿಯಿಂದ ಮಾತ್ರ ಬದುಕಲು ಸಾಧ್ಯ. ರೈತ ಕೂಟದ ಸದಸ್ಯರು ಸಮಯ ವಿದ್ದಾಗ ಶ್ರಮದಾನ, ಗ್ರಾಮನೈರ್ಮಲ್ಯ, ವಯಸ್ಕರ ಶಿಕ್ಷಣ, ಕುಟುಂಬ ಯೋಜನೆ ವಿಚಾರಗಳನ್ನು ಪರಸ್ಪರ ಚರ್ಚೆಮಾಡಿ ಬೇರೆಯವರಿಗೂ ತಿಳಿಸಬೇಕು.

ನಬಾರ್ಡ್ ಮಡಿಕೇರಿಯ ಕಾರ್ಪೋರೇಷನ್ ಬ್ಯಾಂಕ್ ನೊಂದಿಗೆ ಈ ಕಾರ್ಯಕ್ರಮ ಹಮ್ಮಿಕೊಂಡಿದೆ.ಬ್ಯಾಂಕ್‌ನ ಹಿರಿಯ ವ್ಯವಸ್ಥಾಪಕರಾದ ಬಿ. ಯಶವಂತ ಪೈ ಯವರು 'ನಿಮಗೆ ಸಾಲ ಸೌಲಭ್ಯಗಳಿಗೆ ನಮ್ಮ ಬ್ಯಾಂಕ್ ಸದಾ ಸಿದ್ಧವಾಗಿರುತ್ತದೆ. ಅದರ ಉಪಯೋಗವನ್ನು ಪಡೆದುಕೊಳ್ಳಿ' ಎಂದರು.

ಲೀಡ್ ಬ್ಯಾಂಕ್ (ಕಾರ್ಪೋರೇಷನ್)ನ ವ್ಯವಸ್ಥಾಪಕ ಪಿ. ಎಸ್ ವೆಂಕಟಕೃಷ್ಣ ಬಡತನ, ನಿರುದ್ಯೋಗ, ಅನಕ್ಷರತೆ ತೊಲಗಿಸಿದಾಗ ದೇಶಾಭಿವೃದ್ಧಿ ಸಾಧ್ಯ. ಈ ಅವಂದೂರು ಗ್ರಾಮ 'ಸುಸ್ತಿ' ರಹಿತ ಗ್ರಾಮವಾಗಬೇಕು ಎಂದು ಆಶಿಸಿದರು.

ಬೆಟ್ಟಗೇರಿ ಕಾರ್ಪೊರೇಷನ್ ಬ್ಯಾಂಕ್‌ನ ವ್ಯವಸ್ಥಾಪಕ ಕೆ. ಐತಾಳ,ಪಶುಪಾಲನೆ ಇಲಾಖೆಯ ಡಾ|| ಪಿ.ಸಿ. ಮಾಚಯ್ಯ, ರೇಷ್ಮೆ ಇಲಾಖೆಯ ಡಾ|| ಕೆ.ಬಿ. ಶಾಂತಮೂರ್ತಿ ಅವರುಗಳು ತಮ್ಮ ಇಲಾಖೆಯಲ್ಲಿ ದೊರೆಯುವ ಸೌಲಭ್ಯಗಳನ್ನು ಪಡೆದುಕೊಳ್ಳುವಂತೆ ಮನವಿ ಮಾಡಿಕೊಂಡರು.

ಕೊಡಗು ಸಂಗಾತಿಯ ಗೌರವ ಸಂಪಾದಕ ಪಟ್ಟಡ ಎಂ. ಪ್ರಭಾಕರ್ ಅವರು ತಮ್ಮ ಗ್ರಾಮದ ಜನತೆಗೆ 'ಇದು ನನ್ನ ಬಹಳ ದಿನಗಳ ಕನಸು ಈಗ ನೇರವೇರಿದೆ. ಆದ್ದರಿಂದ ಗ್ರಾಮದ ಜನಗಳು ಇದರ ಉಪಯೋಗ ಪಡೆದುಕೊಂಡು ಅಭಿವೃದ್ಧಿ ಹೊಂದಬೇಕು. ಮುಖ್ಯವಾಗಿ ಬ್ಯಾಂಕಿನಿಂದ ಪಡೆದ ಸಾಲದಿಂದ ಮುಕ್ತರಾಗಿ ಜಿಲ್ಲೆಯಲ್ಲಿಯೇ 'ಸುಸ್ತಿ ರಹಿತ' ಮಾದರಿ ಗ್ರಾಮವಾಗಬೇಕು ಎಂದು ತಿಳಿಸಿದರು.

ಇಲ್ಲಿ ನಡೆದ ಈ ಐತಿಹಾಸಿಕ ಕಾರ್ಯಕ್ರಮಕ್ಕೆ ಗ್ರಾಮದ ಜನತೆ ಅತಿ ಉತ್ಸಾಹದಿಂದ ಭಾಗವಹಿಸಿದ್ದರು. ಅವರಲ್ಲೂ ಮಹಿಳೆಯರೆ ಹೆಚ್ಚಾಗಿ ಭಾಗವಹಿಸಿದ್ದದ್ದು ಕಾರ್ಯಕ್ರಮದ ವೈಶಿಷ್ಟ್ಯವಾಗಿತ್ತು.

ಗೋಪಾಲಕೃಷ್ಣ ರೈತ ಕೂಟದ ಅಧ್ಯಕ್ಷರಾದ ಪಟ್ಟಡ ಪಿ. ಗಣಪತಿ ಅತಿಥಿಗಳನ್ನು ಸಭೆಗೆ ಪರಿಚಯ ಮಾಡಿಕೊಟ್ಟರು. ಸಭೆಯ ಅಧ್ಯಕ್ಷತೆಯನ್ನು ಗ್ರಾಮದ ಕೆ. ಎ. ಪಾಪಯ್ಯ ವಹಿಸಿದ್ದರು.

ದೇವಾಲಯದ ಪೂಜೆಯ ನಂತರ ಕಾರ್ಯಕ್ರಮ ಆರಂಭವಾಯಿತು.ಶ್ರೀಮತಿ ಪಾರ್ವತಿ ಅವರ ಪ್ರಾರ್ಥನೆಯೊಂದಿಗೆ ಆರಂಭವಾದ ಕಾರ್ಯಕ್ರಮವನ್ನು ಕೆ. ಎಸ್. ಮಾಚಯ್ಯ ಅವರು ವಂದಿಸಿದರು.

ಗ್ರಾಮದ ಯುವಕ - ಯುವತಿಯರು ಕಾರ್ಯಕ್ರಮ ಯಶಸ್ವಿಯಾಗಲು ಎಲ್ಲಾ ಸಹಕಾರವನ್ನು ನೀಡಿದರು. ಎಲ್ಲರಿಗೂ ಕೊನೆಯಲ್ಲಿ ದೇವರ ಪ್ರಸಾದವನ್ನು ಹಂಚಲಾಯಿತು.

**ಪಿ. ಶಂಕರ ಬಳ್ಳೇಕೆರೆ**

## ವಿವಾಹ

ಕುಶಾಲನಗರ ಹೋಬಳಿ, ಹೊಸಪಟ್ಟಣ ಗ್ರಾಮದ ದಿ|| ಕರ್ಣೆಯ್ಯನ ಪೊನ್ನಪ್ಪನವರ ಮಗ ಲಕ್ಷಣ ಮತ್ತು ಸೋಮವಾರಪೇಟೆ ತಾಲ್ಲೂಕು ತನ್ನೀರುಹಳ್ಳ ಗ್ರಾಮದ ದಿ|| ನಂಗಾರು ತಿಮ್ಮಯ್ಯನವರ ಪುತ್ರಿ ನಿರ್ಮಲ ಇವರ ವಿವಾಹವು ದಿನಾಂಕ 23-2-98ರಂದು ಕುಶಾಲನಗರ ಗೌಡ ಸಮಾಜದಲ್ಲಿ ವಿಜೃಂಭಣೆಯಿಂದ ನಡೆಯಿತು.

# ಜನಾಂಗದ ಯುವ ಪ್ರತಿಭೆ ಕೊಂಪುಳಿರ ಗಣೇಶ ಬೋಪಯ್ಯ

ಇಂದಿನ ಯುವಕ ನಾಳೆ ನಾಡಿನ ಪ್ರಜೆ ಎಂಬ ಮಾತು ಸತ್ಯ. ನನ್ನ ದೇಶ ನನಗೆ ಏನು ಮಾಡಿದೆ ಎಂದು ಕೇಳದೆ ನಾನು ದೇಶಕ್ಕೆ ಏನು ಮಾಡಿದೆ ಎಂದು ಪ್ರಶ್ನೆ ಹಾಕಿಕೊಂಡವನೆ ದೇಶದ ಉತ್ತಮ ಪ್ರಜೆಯಾಗಬಲ್ಲ. ಇಂತಹ ಯುವಕರಲ್ಲಿ ಐಕೊಳ ಗ್ರಾಮದ ಕೊಂಪುಳಿರ ಗಣೇಶ ಬೋಪಯ್ಯನವರು ಒಬ್ಬರು.

ಶ್ರೀಯುತರು ಐಕೊಳ ಗ್ರಾಮದ ಕೃಷಿಕರಾದ ದಿವಂಗತ ಕುರುಂಬಯ್ಯ ಮತ್ತು ಚಿಣ್ಣಮ್ಮನವರ ಆರನೆಯ ಮಗನಾಗಿ ಜನಿಸಿದರು. ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ಮರಗೋಡು ಶಾಲೆಯಿಂದ ಆರಂಭಿಸಿ ಗೋಣಿಕೊಪ್ಪಲಿನ ಕಾವೇರಿ ಕಾಲೇಜಿನಲ್ಲಿ ತಮ್ಮ ಪದವಿಯನ್ನು ಮುಗಿಸಿದರು. ವಿದ್ಯಾರ್ಥಿದೆಸೆಯಲ್ಲಿಯೇ ಹಲವು ಸಂಘ - ಸಂಸ್ಥೆಗಳಲ್ಲಿ ದುಡಿದ ಅನುಭವಿಗಳು. ಪದವಿ ಮುಗಿಸಿ ಕೆಲಸಕ್ಕೆ ಅಲೆಯದೆ ಕೃಷಿಯನ್ನೇ ಕಾಯಕವನ್ನಾಗಿ ಮಾಡಿಕೊಂಡು ಮನೆಯ ಜವಾಬ್ದಾರಿಯನ್ನು ಹೊತ್ತುಕೊಂಡರು.



**ಕೊಂಪುಳೀರ ಗಣೇಶ ಬೋಪಯ್ಯ**

ಮನೆಯ ಜವಾಬ್ದಾರಿಯ ಜೊತೆಗೆ ಊರಿನ ಯುವಕರನ್ನು ಒಂದು ಕಡೆ ಕಲೆಹಾಕಿ ಗ್ರಾಮದ ಬಗ್ಗೆ, ಜನಾಂಗದ ಬಗ್ಗೆ, ಸಂಸ್ಕೃತಿಯ ಬಗ್ಗೆ, ವಿವರಿಸಿ ಅವುಗಳನ್ನು ಉಳಿಸಿ ಬೆಳೆಸಿಕೊಳ್ಳುವುದರ ಕಡೆ ಹೆಚ್ಚು ಗಮನ ಹರಿಸಿದರು. ತಾವೇ ಒಂದು ಯುವಕ ಮತ್ತು ಯುವತಿಯರ ಸಂಘವನ್ನು ಕಟ್ಟಿಕೊಂಡು ಅದರ ಅಧ್ಯಕ್ಷರಾದರು. ಈ ಸಂಘ ಕಳೆದ ಮೂರು ವರ್ಷಗಳಿಂದ ಸರಕಾರದ ಕಾರ್ಯಕ್ರಮಗಳಾದ ಸಾಮಾಜಿಕ, ಕ್ರೀಡೆ, ಸಾಂಸ್ಕೃತಿಕ ಹಾಗೂ ಸಾಕ್ಷರತೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ, ಮಾದರಿ ಸಂಘವಾಗಿ ಬೆಳೆಸಿಕೊಂಡು ಬಂದು "ಆದರ್ಶ ಯುವಕ" ಎಂಬ ಹೆಗ್ಗಳಿಕೆಗೆ ಪಾತ್ರರಾದರು. ಕೇಂದ್ರ ಸರಕಾರದ ನೆಹರು ಯುವ ಕೇಂದ್ರ ಕೊಡುವ "ಶ್ರೇಷ್ಠ ಯುವಕ" ಪ್ರಶಸ್ತಿಯನ್ನು 96-97 ನೆಯ ಸಾಲಿನಲ್ಲಿ ಪಡೆದುಕೊಂಡಿದ್ದಾರೆ.

ಪ್ರತಿ ಜನಾಂಗಕ್ಕೂ ತನ್ನದೆ ಆದ ಸಂಸ್ಕೃತಿ ಇದ್ದೇ ಇರುತ್ತದೆ. ಅದನ್ನು ಉಳಿಸಿ ಬೆಳೆಸಬೇಕು ಎಂಬುದು ಇವರ ಆಸೆ. ತಾಲ್ಲೂಕು ಮಟ್ಟದ ಯುವಜನಮೇಳದಲ್ಲಿ ತಮ್ಮ ಜನಾಂಗದ ಉಡುಪಿನಲ್ಲಿಯೇ ಕೋಲಾಟ ಮತ್ತು ಅರೆಭಾಷೆಯಲ್ಲಿ ಕಾರ್ಯಕ್ರಮಗಳನ್ನು ನೀಡಿ ಜನಾಂಗದ ಜನರಿಂದ ಮೆಚ್ಚುಗೆ ಪಡೆದಿದ್ದಾರೆ.

ಕೊಡಗು ಉತ್ಸವದಲ್ಲಿ ಗೌಡ ಜನಾಂಗಕ್ಕೆ ಪ್ರಾಧಾನ್ಯತೆ ಕೊಡದಿದ್ದದ್ದು ನೋವಿನ ಸಂಗತಿ ಎಂದು ಕೊರಗುತ್ತಾರೆ. ಇನ್ನು ಮುಂದಾದರೂ ನಮ್ಮ ಜನಾಂಗದವರು ಒಟ್ಟಾಗಿ ದುಡಿದರೆ ಜಯ ಸಿಕ್ಕೆ ಸಿಗುತ್ತದೆ ಎಂಬುದರಲ್ಲಿ ನಂಬಿಕೆ ಇಟ್ಟಿದ್ದಾರೆ ಇವರು. 'ಮಾತಿಗಿಂತ ಕೃತಿ ಲೇಸು' ಎನ್ನುವುದು ಇವರ ಮಂತ್ರ. ಯುವಕರಲ್ಲಿ ಯಾವುದೇ ಕೆಲಸವನ್ನು ಮಾಡಿ ತೋರಿಸುವ ಛಲ ಬರಬೇಕು ಎನ್ನುತ್ತಾರೆ.

ಕೊಡಗಿನಲ್ಲಿಯೇ ವಿಶಿಷ್ಟವಾದ ದೊಡ್ಡಮನೆಯ ಒಡೆಯರಾದ ಇವರು ಬಿಳಿಗೇರಿಯ ಕಾಳೆಯಂಡ್ರ ಸುಬ್ಬಯ್ಯ ಮತ್ತು ರುಕ್ಮಿಣಿ ಅವರ ಪುತ್ರಿಯಾದ ದಮಯಂತಿ ಅವರನ್ನು ಕೈಹಿಡಿದು ಎರಡು ಮಕ್ಕಳ ಪುಟ್ಟ ಸಂಸಾರದೊಂದಿಗೆ ಸುಖಜೀವನ ನಡೆಸುತ್ತಿದ್ದಾರೆ.

ಶ್ರೀಯುತರು ಜನಾಂಗದ ಗೌಡ ಸಮಾಜ, ಗೌಡ ಸಾಂಸ್ಕೃತಿಕ ಅಕಾಡೆಮಿ ಮತ್ತು ಇತರ ಸಂಘ-ಸಂಸ್ಥೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ರಾಜಕೀಯ ಜೀವನದಲ್ಲಿ ಒಳ್ಳೆಯ ಹೆಸರು ಮಾಡಿರುವ ಇವರು ರಾಜಕೀಯದಲ್ಲಿ ಭವಿಷ್ಯ ಇರುವ ವ್ಯಕ್ತಿ. ಯುವ ಜನರ ಸಂಘಟನೆಯಲ್ಲಿ ಚತುರರಾದ ಬೋಪಯ್ಯ ಜನ ನಾಯಕರಾಗುವ ಸರ್ವ ಗುಣವನ್ನು ಹೊಂದಿದ್ದಾರೆ. ಮುಂದಿನ ಜನಾಂಗಕ್ಕೆ ಮತ್ತು ನಾಡಿಗೆ ಸತ್ಪ್ರಜೆಯಾಗಲೆಂದು "ಕೊಡಗು ಸಂಗಾತಿ" ಬಳಗ ಆತ್ಮೀಯವಾಗಿ ಆಶಿಸುತ್ತದೆ.

● **ಬೈತಡ್ಕ ಜಾನಕಿ ಬೆಳ್ಯಪ್ಪ**, ಮಡಿಕೇರಿ

---

**ಸೂಕ್ತಿ**

ಕಣ್ಣಿಗೆ ಕಾಣುವಂತ ದೇವರಂಥ ಮನುಷ್ಯರಾದ ನಿಮ್ಮ ಅಣ್ಣನಿಗೆ ನಮಿಸಲು ಆಗದಿದ್ದರೆ, ಕಣ್ಣಿಗೆ ಕಾಣದಂತೆ, ಅವಿತಿರುವ ದೇವರಿಗೆ ನೀವು ಹೇಗೆ ನಮಿಸಲು ಸಾಧ್ಯ?

**-ಸ್ವಾಮಿ ವಿವೇಕಾನಂದ**

# ಕೊಡಗಿನ ದೊಡ್ಡವೀರರಾಜೇಂದ್ರ ಒಡೆಯರು 1799ರಲ್ಲಿ ನಾಪೋಕ್ಲುನಾಡಿನ ದೇವಟ್‌ಪರಂಬಿನಲ್ಲಿ ಏರ್ಪಡಿಸಿದ ಸತ್ಕಾರ ಕೂಟ

ಪ್ರಸ್ತಾವನೆ :-

**ಕೊಡಗಿನ ಇತಿಹಾಸದಲ್ಲಿ ನಡೆದ ಕೆಲವೊಂದು ಸಂಗತಿಗಳನ್ನು ಇತಿಹಾಸಕಾರರು ಬೆಳಕಿಗೆ ತಾರದೆಯೇ ಬಿಟ್ಟುಬಿಟ್ಟಿದ್ದಾರೆ. ಅಂತಹದೊಂದು ಸಂಗತಿ ಇಲ್ಲಿದೆ.**

**ನಾನು ವಿದ್ಯಾರ್ಥಿಯಾಗಿದ್ದಾಗ ನಮ್ಮ ಮನೆ ಪೂಜಾರಿ ಪೂವಯ್ಯನವರು ನನಗೆ ಹೇಳಿದ ಸಂಗತಿಯನ್ನು ಈ ಮುಖಾಂತರ ಓದುಗರಿಗೆ ತಿಳಿಸುತ್ತಿದ್ದೇನೆ.**

ಟಿಪ್ಪು ಸುಲ್ತಾನನು ನೇರಹಾದ ಯುದ್ಧದಿಂದ ಕೊಡಗನ್ನು ಗೆಲ್ಲಲು ಸಾಧ್ಯವಾಗದಿದ್ದಾಗ, ಅವನ ಸೈನಿಕರಿಗೆ ಕುಪ್ಪಸದಟ್ಟಿ, ರುಮಾಲು ಧರಿಸಿ, ಕೋವಿ ಹಿಡಿದು ಬರುತ್ತಿದ್ದ ಟಿಪ್ಪುಸುಲ್ತಾನನ ಸೈನಿಕರನ್ನು ಕೊಡಗಿನವರು, ಬರುತ್ತಿರುವವರು ತಮ್ಮವರೆಂದು ತಿಳಿದು ತಮ್ಮ ಹತ್ಯಾಹಾರಗಳನ್ನು ಹಿಡಿಯದೆ ಬಂದವರು ತಮ್ಮವರೆಂದು ಭ್ರಮಿಸಿ ಅವರನ್ನು ಸ್ವಾಗತಿಸಲು ಹೋದ ಕೊಡಗು ವೀರರಿಗೆ ಆದ ಗತಿ ಟಿಪ್ಪು ಸುಲ್ತಾನನ ಸೆರೆ.ಹೀಗೆ ಸೆರೆ ಹಿಡಿದ ಜನರನ್ನು ದೇವಟ್‌ಪರಂಬಿನಲ್ಲಿ ಕೂಡಿ ಹಾಕಿ ಅವರನ್ನು ಕೈದಿಗಳಾಗಿ ಶ್ರೀರಂಗಪಟ್ಟಣಕ್ಕೆ ಕೊಂಡೊಯ್ದು ಅಲ್ಲಿ ಮುಸಲ್ಮಾನರಾಗಿ ಮಾಡಿದ. ದಿವಂಗತ ಡಿ.ಯನ್.ಕೃಷ್ಣಯ್ಯನವರ ಅಭಿಪ್ರಾಯದಂತೆ 80,000 ಕೊಡಗಿನವರನ್ನು ಈ ರೀತಿ ಜಾತಿ ಭ್ರಷ್ಟರನ್ನಾಗಿ ಮಾಡಿದನೆಂದು ಬರೆಯುತ್ತಾರೆ. ಈ ರೀತಿ ಸೆರೆ ಹಿಡಿದವರಲ್ಲಿ ಈಗಿನ ನಾಪೋಕ್ಲುನಾಡು [ನಾಲ್ಕು ನಾಡು, ಪಡಿನಾಲ್ಕುನಾಡು. ಮತ್ತುಕಡಿಯತ್ತನಾಡು] ಭಾಗಮಂಡಲನಾಡು [ತಾವುನಾಡು, ಬೇಂಗುನಾಡು, ಕುಯ್ಯಂಗೇರಿನಾಡು] ಮಡಿಕೇರಿ ನಾಡಿನ [ಹೊರಮಲೆನಾಡು, ಮದೆನಾಡು ಕಗ್ಗೋಡ್ಲುನಾಡು ಮತ್ತು ನೂರೊಕ್ಲುನಾಡು] ಈ ಪ್ರದೇಶದ ಜನರನ್ನೇ ಹೆಚ್ಚಾಗಿ ಶ್ರೀರಂಗಪಟ್ಟಣಕ್ಕೆ ಕೊಂಡೊಯ್ದುದರಿಂದ ಇಲ್ಲಿದ್ದ ಭೂಮಿಗಳೆಲ್ಲಾ ವ್ಯವಸಾಯವಿಲ್ಲದೆ ಪಾಳು ಬಿದ್ದು ಜನರ ವಾಸವಿಲ್ಲದೆ ಮಲೇರಿಯಾ ಕಾಟ ಹೆಚ್ಚಾಯಿತು. ಇದನ್ನು ಕಂಡ ದೊಡ್ಡ ವೀರರಾಜೇಂದ್ರ ಒಡೆಯ ತನ್ನ ಸಂಸ್ಥಾನಕ್ಕೆ ಸೇರಿದ್ದ ಸುಳ್ಯ, ಸುಬ್ರಮಣ್ಯ ಬೆಳ್ಳಾರೆ, ಪುತ್ತೂರು, ಬೆಳ್ತಂಗಡಿ ಮತ್ತು ಪಾಣೆ ಮಂಗಳೂರಿನವರೆಗಿದ್ದ ಹಾಗೂ ಪಿರಿಯಾಪಟ್ಟಣ ತಾ|| ಐಗೂರು ಸೀಮೆ, ಅರಕಲಗೋಡು ತಾ|| ಮಂಜರಾಬಾದ್ ಪ್ರದೇಶಗಳಲ್ಲಿಂದ ಪ್ರತಿಯೊಂದು ಗ್ರಾಮದಿಂದ 15 ಜನರಂತೆ ಈಗಿನ ಕೊಡಗಿಗೆ ಬರುವಂತೆ ಕೇಳಿಕೊಂಡರು.ಹಾಗೆ ಪಾಳು ಬಿದ್ದ ಭೂಮಿಯನ್ನು ರೂಢಿಸುವುದಕ್ಕೆ ಬರುವಂತೆ ಒಪ್ಪಿದವರು ಹೆಚ್ಚಿನ ಜನ ಗೌಡರು, ಸ್ವಲ್ಪ ಬಂಟರು, ಗಾಣಿಗರು ಮುಂತಾದವರು ಇದ್ದರು.

ಅವತರಣಿಕೆ :-

ಈ ರೀತಿ ಮೇಲೆ ಕಾಣಿಸಿದ ಪ್ರದೇಶದ ಜನರು ಈಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇರುವ ತೊಡಿಕ್ಕಾನಕ್ಕಾಗಿ ಘಟ್ಟಹತ್ತಿ ಭಾಗಮಂಡಲಕ್ಕಾಗಿ ದೇವಟುಪರಂಬಿಗೆ 1799ರಲ್ಲಿ ಬಂದರು. ದೊಡ್ಡವೀರರಾಜರ ಆಜ್ಞೆಯಂತೆ ಆ ದಿನ ದೇವಟುಪರಂಬಿನ ಸುತ್ತಮುತ್ತಲ ಪ್ರದೇಶಗಳಲ್ಲಿನ ಕೊಡವರು ಮತ್ತು ಇನ್ನಿತರ ಜನರು ಸೇರಿದ್ದರು. ರಾಜಾಜ್ಞೆಯಂತೆ ಆ ದಿನ ಅಕ್ಕಿಯ ಇಡ್ಲಿ [ಬಟ್ಟಲು ಹಿಟ್ಟು] ಮತ್ತುಹಂದಿಮಾಂಸದ ಅಡುಗೆಯನ್ನು ಮಾಡಿಸಿ ಬಡಿಸಲಾಗಿತ್ತು. ದೇವಟುಪರಂಬು ಆಗಿನ ಕಾಲಕ್ಕೆ ದೊಡ್ಡ ಮೈದಾನವಾದುದರಿಂದ ಬಂದ ಜನರನ್ನು ದುಂಡಾಕೃತಿಯಲ್ಲಿ ಕೂರಿಸಿ [ದುಂಡು ಮೇಜಿನ ಆಕೃತಿಯಲ್ಲಿ] ಊಟವನ್ನು ಬಡಿಸಿ ಊಟವಾದ ನಂತರ ಈಗಿನ ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದವರಿಗೆಲ್ಲ ಕುಪ್ಪಸದಟ್ಟಿ ಮತ್ತು ರುಮಾಲೆಯನ್ನು ಕೊಟ್ಟು ಇನ್ನು ಮುಂದೆ ರಾಜ ದರ್ಬಾರಿಗೆ ಹಾಗೂ ರಾಜ ಕಾರ್ಯಕ್ಕೆ ಬಂದಾಗ ಈ ಸಮವಸ್ತ್ರವನ್ನು ಧರಿಸಿಕೊಂಡು ಬರಬೇಕೆಂದೂ, ನೀವುಗಳು ಪಾಳು ಬಿದ್ದಿರುವ ಭೂಮಿಯನ್ನು ರೂಢಿ ಮಾಡಿ ಅರಮನೆಗೆ ಬಂದು ನನ್ನ ಸನ್ನಿಧಾನದಲ್ಲಿ ನಿವೇದಿಸಿಕೊಂಡಲ್ಲಿ ನೀವು ವ್ಯವಸಾಯ ಮಾಡಿದ ಭೂಮಿ, ಬಾಣೆ,

○ಲೇಖಕ : ಪೂಜಾರಿ ಮೊಣ್ಣಪ್ಪ

ಮನೆ ದಳ ಮುಂತಾದವುಗಳನ್ನು ನಿಮ್ಮದಾಗಿ ನಿರೂಪ ಬರೆಸಿ ಕೊಡುವುದಾಗಿ ಆಶ್ವಾಸನೆ ಕೊಟ್ಟು, ಇನ್ನು ಮುಂದೆ ಇಲ್ಲಿ ಸೇರಿದ ಎಲ್ಲಾ ಜನರು ಅಣ್ಣತಮ್ಮಂದಿರಂತೆ ಇರಬೇಕೆಂದು ನಿರ್ದೇಶಿಸಿದರು. ಅದೇ ರೀತಿ ಕೊಡಗಿನಲ್ಲಿ ಹೊಸದಾಗಿ ಬಂದ ಗೌಡರನ್ನು ಕೊಡಗಿನವರು ಅಣ್ಣ ಅಕ್ಕ ಎಂದು ಕರೆಯುವುದು ಗೌಡರು ಕೊಡವರನ್ನು ಅಣ್ಣ ಅಕ್ಕಎಂದು ಕರೆಯುವುದು ರೂಢಿಯಾಗಿ ಈಗಲೂ ಕೊಡಗಿನಲ್ಲಿ ಅನ್ಯೋನ್ಯವಾಗಿ ಪ್ರೀತಿಭಾವದಿಂದ ಪ್ರತಿಯೊಂದು ಮದುವೆಕಾರ್ಯ, ದೇವಸ್ಥಾನದಕಾರ್ಯ, ಹಬ್ಬಹರಿದಿನಗಳಲ್ಲಿ ಅಣ್ಣತಮ್ಮ, ಅಕ್ಕತಂಗಿಯರಂತೆ ವರ್ತಿಸಿ ಊರಿನ ಸಹಬಾಳ್ವೆಗೆ ನಾಂದಿಯಾಗಿ ಬಾಳಿ ಬದುಕುತ್ತಿದ್ದಾರೆ.

ಕೊಡಗು ರಾಜರ ಕಾಲದಲ್ಲಿ ಕೊಟ್ಟ ನಿರೂಪದ ಮಾದರಿಯನ್ನು ಇದರೊಡನೆ ಕೊಡಲಾಗಿದೆ. ●

(4ನೇ ಪುಟದಿಂದ)

ಬಹಳವಾಗಿತ್ತು. ದಂಗೆಯ ಸೂತ್ರಧಾರಿಗಳು ಇದನ್ನು ತಮ್ಮ ಅನುಕೂಲಕ್ಕೆ ದುಡಿಸಿಕೊಂಡರು. ಅಪ್ಪಾಜಿ ಅರಸನ ಮಗ ವೀರಪ್ಪ ಜೀವಂತ ಇದ್ದಾನೆ ಎಂಬ ಪ್ರಚಾರ ಪ್ರಾರಂಭವಾಯಿತು. ಅಪರಂಪಾರನೆಂಬ ಸನ್ಯಾಸಿಯೊಬ್ಬ ಕಾಣಿಸಿಕೊಳ್ಳುತ್ತಾನೆ. ಹುಲಿಕೊಂದ ನಂಜಯ್ಯ ಆತನೊಡನೆ ಸೇರಿಕೊಳ್ಳುತ್ತಾನೆ. ಕೂಜುಗೋಡು ಮನೆಯಲ್ಲಿ ಇವರು ಆಶ್ರಯ ಪಡೆಯುತ್ತಾರೆ. ಆದರೂ 1835ರಲ್ಲಿ ಅಪರಂಪಾರನನ್ನು ಮಂಜರಾಬಾದಿನಲ್ಲಿ ಬಂಧಿಸುತ್ತಾರೆ. ಅದೇ ಕೆಲಸವನ್ನು ಮುಂದುವರಿಸಲು ವೀರಪ್ಪನ ಇನ್ನೊಬ್ಬ ಮಗನೆಂದು ಕಲ್ಯಾಣಪ್ಪನನ್ನು ತಯಾರು ಮಾಡುತ್ತಾರೆ. ಮುಂದಿನ ವರ್ಷ ಆತನ ಹೆಸರಲ್ಲಿ ಜನ ಸಂಘಟಿತರಾಗತೊಡಗುತ್ತಾರೆ. 1836ರಲ್ಲಿ ಕಲ್ಯಾಣಪ್ಪನನ್ನು ಬೈತೂರಿನಲ್ಲಿ ಸೆರೆ ಹಿಡಿಯುತ್ತಾರೆ. ಆಗ ಕಲ್ಯಾಣಪ್ಪನ ಹೆಸರಿನಲ್ಲಿ ಇನ್ನೊಬ್ಬನನ್ನು ಪರಿಚಯಿಸುವ ನಿರ್ಧಾರಕ್ಕೆ ಬರುತ್ತಾರೆ. ಪುಟ್ಟ ಬಸಪ್ಪ ಎಂಬಾತನನ್ನು ಹುಲಿಕೊಂದ ನಂಜಯ್ಯ ಆರಿಸಿ ಪೂಮಾಲೆ ಬೆಟ್ಟದಲ್ಲಿ ಆತನನ್ನು ಇರಿಸಿಕೊಂಡು ನಾನಾ ಭಾಗದ ಜನರಿಗೆ ಆತನನ್ನು ಪರಿಚಯಿಸುತ್ತಾನೆ.

ಪ್ರಭಾವಿ ಮುಖಂಡ ಕೆದಂಬಾಡಿ ರಾಮಯ್ಯನ ಮುಂದಾಳತ್ವದಲ್ಲಿ ಮಾರ್ಚ್ 30ರಂದು ಬೆಳ್ಳಾರೆಯಲ್ಲಿ 2000 ಸಶಸ್ತ್ರ ಜನ ಸೇರಿ ಖಜಾನೆಯನ್ನು ವಶಕ್ಕೆ ತೆಗೆದುಕೊಳ್ಳುತ್ತಾರೆ. ಅದೇ ದಿನ 200 ಸೈನಿಕರ ತಂಡ ಕುಂಚಡ್ಕ ತಿಮ್ಮ ಮತ್ತು ಕುಡೆಕಲ್ಲ ಪುಟ್ಟ ಇವರ ಮುಂದಾಳತ್ವದಲ್ಲಿ ಕಾಸರಗೋಡಿಗೆ ಹೋಗುತ್ತದೆ. ಇವರು ಎಪ್ರಿಲ್ ಎರಡರಂದು ಕಾಸರಗೋಡು, ಮೂರರಂದು ಕುಂಬ್ಳೆ, ನಾಲ್ಕರಂದು ಮಂಜೇಶ್ವರಗಳನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುತ್ತಾರೆ. ಅಲ್ಲಿ ತಮ್ಮ ಸರಕಾರದ ತಹಶೀಲ್ದಾರರಿಗೆ ಅಧಿಕಾರ ವಹಿಸಿ, ಎಲ್ಲಾ ಸರಕಾರಿ ನೌಕರರಿಗೆ ಸಂಬಳ ವಿತರಿಸಿ, ತಮ್ಮ ಸರಕಾರಕ್ಕೆ ವಿಧೇಯರಾಗಿರುವುದಾಗಿ ಮುಚ್ಚಳಿಕೆ ಬರೆಸಿಕೊಳ್ಳುತ್ತಾರೆ. ಹಿಂದೆಯೇ ನಿಶ್ಚಯಿಸಿದ ಪ್ರಕಾರ ಎಪ್ರಿಲ್ ಐದರಂದು ಮಂಗಳೂರು ತಲುಪುತ್ತಾರೆ.

ಮಾರ್ಚ್ 30ರಂದು 200 ಸೈನಿಕರ ಇನ್ನೊಂದು ತಂಡ ಬಿಸ್ಲೆ ಮಾರ್ಗವಾಗಿ ಮಡಿಕೇರಿ ಕಡೆ ಹೊರಟಿರುತ್ತದೆ. ದಾರಿಯಲ್ಲಿ ಸಿಕ್ಕಿದ ಸರಕಾರಿ ಕಛೇರಿಗಳನ್ನು ಖಜಾನೆಗಳನ್ನು ಸ್ವಾಧೀನಪಡಿಸಿಕೊಳ್ಳುತ್ತಾ ವಿರೋಧಿಸಿದವರನ್ನು ಸೆರೆಹಿಡಿಯುತ್ತಾ, ತಮ್ಮ ಕಡೆಯ ಅಧಿಕಾರಿಗಳನ್ನು ನೇಮಿಸುತ್ತಾ ಮುಂದುವರಿಯುತ್ತಾರೆ.

ಅದೇ ಮಾರ್ಚ್ 30ರ ರಾತ್ರಿ ಬೆಳ್ಳಾರೆಯ ಘಟನೆಯ ವರದಿ ಕಲೆಕ್ಟರ್ ಲೆವಿನ್‌ಗೆ ತಲುಪುತ್ತದೆ. ಮರುದಿನ ಬೆಳಿಗ್ಗೆ 161 ಸೈನಿಕರೊಂದಿಗೆ ಹೊರಟು ಪುತ್ತೂರಿಗೆ ತಲುಪುವಾಗ ರಾತ್ರಿಯಾಗಿರುತ್ತದೆ. ಮರುದಿನ ನೋಡುವಾಗ 1200ಕ್ಕೂ ಮೀರಿ ಸಶಸ್ತ್ರ ಜನರು ಆತನನ್ನು ಸುತ್ತುವರಿದಿದ್ದು ಕಂಡು ಕಂಗಾಲಾಗುತ್ತಾನೆ. ಎಪ್ರಿಲ್ 2ರ ರಾತ್ರಿ ಮಂಗಳೂರಿಗೆ ಪಲಾಯನ ಮಾಡುತ್ತಾನೆ. ಅಲ್ಲಿ ನೋಡಿದರೆ ನಾಗರಿಕರು ಬ್ರಿಟಿಷರಿಗೆ ಅಸಹಕಾರ ಹಾಗೂ ಎದುರಾಳಿಗಳಿಗೆ ಭವ್ಯ ಸ್ವಾಗತ ನೀಡಿ ಅದರೊಂದಿಗೆ ಸೇರಿಕೊಂಡಿರುವುದು ಕಂಡು ಬರುತ್ತದೆ.

ಎಪ್ರಿಲ್ 5ರಂದು ಬಾವುಟಗುಡ್ಡದಲ್ಲಿ ಹಾರಾಡುತ್ತಿದ್ದ ಬ್ರಿಟಿಷರ ಬಾವುಟವನ್ನು ಇಳಿಸಿ ತಮ್ಮ ಧ್ವಜಾರೋಹಣ ಮಾಡುತ್ತಾರೆ. ಬ್ರಿಟಿಷ್ ಪ್ರಜೆಗಳಿಗೆ ಓಡಿ ಹೋಗಲು ಧೈರ್ಯಸಾಲದೆ. ಕಂಟೋನಮೆಂಟಿನ ಭದ್ರನೆಲೆಯಲ್ಲಿ ಅವಿತುಕೊಳ್ಳುತ್ತಾರೆ. ಮರುದಿನ ಹೊನ್ನಾವರದಿಂದ 60 ಸೈನಿಕರು ಗುಂಡುಮದ್ದುಗಳೊಂದಿಗೆ ಬಂದ ಮೇಲೆ ಬ್ರಿಟಿಷ್ ಪ್ರಜೆಗಳನ್ನು ಅವರು ಸುತ್ತುವರಿದು ಬಹಳ ಸಾಹಸದಿಂದ ಹಡಗು ಹತ್ತಿಸಿ ಕಣ್ಣಾನೂರಿಗೆ ಕಳುಹಿಸುತ್ತಾರೆ.

ಬ್ರಿಟಿಷರ ಸೈನ್ಯದಲ್ಲಿ ಸುಭೇದಾರನಾಗಿದ್ದ ಗುಡ್ಡೆ ಅಪ್ಪಯ್ಯ ಅವರ ವಿರೋಧಿಗಳೊಂದಿಗೆ ಸೇರಿದ್ದು ಅವರಿಗೆ ದೊಡ್ಡ ಆತಂಕವಾಗುತ್ತದೆ. ಅಪ್ಪಯ್ಯನ ಸಹೋದರ ಗುಡ್ಡೆ ತಮ್ಮಯ್ಯ ಅರಸರ ಕಾಲದಲ್ಲಿ ಸುಳ್ಯದಲ್ಲಿ ಪಾರುಪತ್ಯಗಾರನಾಗಿದ್ದು ಪದಚ್ಯುತಿಯ ನಂತರ ದಂಗೆಯನ್ನು ರೂಪಿಸುವವರೊಡನೆ ಸೇರಿಕೊಂಡಿರುತ್ತಾರೆ. ಗುಡ್ಡೆ ಅಪ್ಪಯ್ಯನು ಮೇಲ್ ಕೊಡಗಿಗೆ ಹಿಂತಿರುಗಿ ನಾಕುನಾಡು ಸುಭೇದಾರ ಮಾದಯ್ಯನನ್ನು ದಂಗೆಯಲ್ಲಿ ಭಾಗವಹಿಸಲು ಪ್ರಚೋದಿಸುತ್ತಾನೆ. ಅವನ ಸ್ನೇಹಿತರಾದ ಸುಭೇದಾರರು ಮಡಿಕೇರಿಗೆ ದಾಳಿ ಇಡುವಾಗ ಸಹಕರಿಸಲು ಒಪ್ಪಿಕೊಳ್ಳುತ್ತಾರೆ. ಈ ವಿಚಾರವನ್ನು ಕುಂದಳ್ಳಿಯಲ್ಲಿ ಬಂದು ಇಳಿದುಕೊಂಡಿರುವ ಕೂಜುಗೋಡು ಅಪ್ಪಯ್ಯ ಮತ್ತು ಮಲ್ಲಪ್ಪ ಸಹೋದರರಿಗೆ ತಿಳಿಸಲು ಗುಡ್ಡೆ ಅಪ್ಪಯ್ಯ ಹೋಗುತ್ತಾನೆ. ಅವರು ಕೊಡಗಿನ ಸುಬೇದಾರ ಅಪ್ಪಚ್ಚುನನ್ನು ಸೆರೆಹಿಡಿಯುತ್ತಾರೆ.

ಇತ್ತ ಕೊಡಗಿನಲ್ಲಿ ಕ್ಯಾ। ಲೀಹಾರ್ಡಿಗೆ ಬೋಪು ದಿವಾನನ ಸಂಬಂಧಿಕರು ತಮ್ಮನ್ನು ವಿರೋಧಿಸಲು ಹೊರಟಿರುವುದು ಗೊತ್ತಾಗಿ ಆತನನ್ನು ಕರೆದು ಗದರಿಸುತ್ತಾನೆ. ಅವರ ಮನವೊಲಿಸುವ ಭರವಸೆಯ ಮಾತು ಕೊಟ್ಟು ಮಾದಯ್ಯನಲ್ಲಿಗೆ ಹೋಗುತ್ತಾನೆ. ಅವನನ್ನು ಅವಿುಷಕ್ಕೆ ಬಲಿ ಬೀಳಿಸಿ ನಿಷ್ಠೆ ಬದಲಾಯಿಸುವಂತೆ ಮಾಡುತ್ತಾನೆ. ಕೊನೆಗೂ ಬ್ರಿಟಿಷರ ಕುತಂತ್ರ ಸಫಲವಾಗುತ್ತದೆ. ಕೊಡಗಿನ ಸೈನ್ಯದ ಬರುವಿಕೆಯ ನಿರೀಕ್ಷೆಯಲ್ಲಿದ್ದ ಕುಕ್ಕನೂರು ಚೆಣ್ಣಯ್ಯ, ಪೆರಾಜೆ ಕೃಷ್ಣಯ್ಯ, ಕರಣೀಕ ಸುಬ್ಬಯ್ಯ ಮೊದಲಾದವರು ಅವರನ್ನು ಸ್ವಾಗತಿಸುತ್ತಾರೆ. ಆಗ ಅವರನ್ನು ಸುಲಭವಾಗಿ ಸೆರೆ ಹಿಡಿಯುತ್ತಾರೆ. ಇದೇ ನಾಟಕ ಕುಂದಳ್ಳಿಯಲ್ಲಿಯೂ ನಡೆಯುತ್ತದೆ.

ಆದರೆ ಅಪ್ಪಚ್ಚು ಮೊದಲಾದ ಕೊಡಗು ಸೈನ್ಯದ ಅಧಿಕಾರಗಳು ಇವರಲ್ಲಿ ಒತ್ತೆಯಾಳುಗಳಾಗಿದ್ದ ಕಾರಣ ಇವರೊಂದಿಗೆ ಒಪ್ಪಂದಕ್ಕೆ ಬರಬೇಕಾಗುತ್ತದೆ. ಆದರೂ ಸೆರೆಸಿಕ್ಕಿದ್ದ ನಾಲ್ಕು ಜನರನ್ನು ಗಲ್ಲಿಗೇರಿಸು

ತ್ತಾರೆ. ಮೇ.27ರಂದು ಲಕ್ಷ್ಮಪ್ಪ ಬಂಗರಸ ಮೇ. 30ರಂದು ಉಪ್ಪಿನಂಗಡಿ ಮಂಜ, ಜೂನ್ 19ರಂದು ಪುಟ್ಟಬಸವ ಅಕ್ಟೋಬರ್ 31ರಂದು ಗುಡ್ಡೆ ಅಪ್ಪಯ್ಯ ಗಲ್ಲಿಗೇರಿಸಲ್ಪಡುತ್ತಾರೆ. ಖೈದಿಗಳ ಪೈಕಿ ಪುಟ್ಟಯ್ಯ, ಮುಂಗಣ್ಣ, ಬಂಗಾರಿ ಜೈಲಿನಲ್ಲಿ ಮೃತರಾಗುತ್ತಾರೆ. ಫೌಜುದಾರಿ ಅದಾಲತ್‌ನಲ್ಲಿ ಮರಣದಂಡನೆಗೆ ಗುರಿಯಾಗಿದ್ದ 5 ಜನರಿಗೆ ಮತ್ತೆ ವಿನಾಯಿತಿ ಸಿಗುತ್ತದೆ.

ಕುಕ್ಕನೂರು ಚಿನ್ನಯ್ಯ ಮತ್ತು ಪೆರಾಜೆಯ ಕೃಷ್ಣಯ್ಯ ಇವರಿಬ್ಬರಿಗೂ ಜೀವಾವಧಿ ಶಿಕ್ಷೆ ಆದಂತೆ ತಿಳಿದು ಬರುತ್ತದೆ. ಮದ್ರಾಸ್ ಪತ್ರಾಗಾರದಲ್ಲಿ ಸುರಕ್ಷಿತವಾಗಿ ಖೈದಿಗಳ ವಿಚಾರಣೆ ದಾಖಲೆಗಳು ಈ ದಂಗೆಯ ಬಗ್ಗೆ ಇನ್ನಷ್ಟು ಸತ್ಯಾಂಶಗಳನ್ನು ನೀಡಬಲ್ಲವು.

ದಿವಾನ್ ಲಕ್ಷ್ಮೀನಾರಾಯಣ ಒಳಸಂಚಿನಲ್ಲಿ ಭಾಗಿಯಾಗಿದ್ದನೆಂಬ ಅನುಮಾನದಿಂದ ಸೆರೆಮನೆ ಸೇರಬೇಕಾಯಿತು. ಆತನ ಹೆಂಡತಿಯ ಸಹೋದರ ಕೃಷ್ಣಯ್ಯನೆ ಶಿಕ್ಷೆಗೊಳಗಾದವನು. ಕರಣಿಕ ಸುಬ್ಬಯ್ಯ ದಿವಾನರ ಮಗಳ ಗಂಡ, ದಿವಾನರ ತಮ್ಮ ರಾಮಪ್ಪಯ್ಯ ಇವರಿಬ್ಬರ ಪರಮ ಮಿತ್ರ. ಆತನೂ ದಂಗೆಯ ಒಳಸಂಚಿನಲ್ಲಿ ಭಾಗಿಯಾಗಿದ್ದ. ಆತ ಕೊಲ್ಲಲ್ಪಟ್ಟು ಇದು ದಂಗೆಯ ನಾಯಕ ರಾಮಯ್ಯ ಗೌಡನ ಅಪ್ಪಣೆಯಂತೆ ನಡೆದಿದೆ ಎಂಬ ಪ್ರಚಾರ ಉಂಟಾಗುತ್ತದೆ. ಆದರೂ ಕೂಡಾ ಬ್ರಿಟಿಷರ ಒಡೆದು ಆಳುವ ಈ ತಂತ್ರಕ್ಕೆ ಯಾರೂಬಲಿಯಾಗದೆ ಒಗ್ಗಟ್ಟು ಕಾಯ್ದುಕೊಂಡರು.

ಬ್ರಿಟಿಷರ ಬೆಂಬಲಿಗರನ್ನು ಸಂತೋಷಪಡಿಸಲು ಯಕ್ಷಗಾನ ಪ್ರಸಂಗ ತಯಾರಾಯಿತು. ಅದರಲ್ಲಿ ಆಟ್ಲೂರು ದೊರೆ ರಾಮಪ್ಪಯ್ಯನನ್ನು ಖಳನಾಯಕನನ್ನಾಗಿ ಮಾಡಿದ್ದಾರೆ. ಆ ಯಕ್ಷಗಾನವೇ ಈಗ ಪ್ರಚಾರದಲ್ಲಿರುವ ಚರಿತ್ರೆ. ಇದನ್ನು ಸರಿಪಡಿಸುವುದು ಅಗತ್ಯ.

ಈ ಪ್ರಮುಖ ಘಟನೆಯ ನೆನಪು ನಮ್ಮ ಮುಂದಿನ ಪೀಳಿಗೆಯಲ್ಲಿ ಉಳಿದು, ದೇಶಭಕ್ತಿ, ಒಗ್ಗಟ್ಟು ಮೂಡಿ ಬರುವಂತಾಗಲು ಸಾಂಕೇತಿಕವಾಗಿ ಸ್ಮಾರಕಗಳನ್ನು ನಿರ್ಮಿಸಬೇಕು. ಅಮರ ಸುಳ್ಯ ದಂಗೆಯ ಮುಂದಾಳುಗಳು 1837ರ ಎಪ್ರಿಲ್ 5ರಂದು ಮಂಗಳೂರಿನ ಬಾವುಟಗುಡ್ಡದಲ್ಲಿ ತಮ್ಮ ಧ್ವಜಾರೋಹಣ ಮಾಡಿದ ಪುಣ್ಯ ಸ್ಮರಣೆಯನ್ನು ಪ್ರತಿವರ್ಷ ಅದ್ದೂರಿಯಿಂದ ಆಚರಿಸಬೇಕು. ಅದು ಸ್ವರ್ಣ ಸ್ವಾತಂತ್ರ್ಯ ವರ್ಷದಿಂದಲೇ ಪ್ರಾರಂಭವಾಗಲಿ.

# ಗಮನಿಸಿ !!

ಆತ್ಮೀಯ ಓದುಗರೆ,

ನಿಮ್ಮಗಳ ನೆಚ್ಚಿನ "ಕೊಡಗು ಸಂಗಾತಿ" ಪಾಕ್ಷಿಕವು ಒಂದು ವರ್ಷವನ್ನು ಮುಗಿಸಿ ಎರಡನೆಯ ವರ್ಷಕ್ಕೆ ಅಡಿ ಇಡುತ್ತಿದೆ ಎಂದು ತಿಳಿಸಲು ಹರ್ಷಿಸುತ್ತೇವೆ. ಈ ಸಂದರ್ಭದಲ್ಲಿ ನಿಮಗೆ ನಮ್ಮ ಬಳಗದ ಶುಭಾಶಯಗಳು.

ಈಗಾಗಲೇ ಕೆಲವರ ಚಂದಾ ಹಣದ ವಾಯಿದೆ ಮುಗಿಯುತ್ತಾ ಬಂದಿದೆ. ಅಂತಹವರು ತಮ್ಮ ಚಂದಾ ಹಣವನ್ನು ಈ ಕೂಡಲೆ ಕೆಳಗಿನ ವಿಳಾಸಕ್ಕೆ ಎಂ.ಓ. ಅಥವಾ ಡಿ.ಡಿ. ಯ ಮೂಲಕ ಕಳುಹಿಸಿ ನಿಮ್ಮ ಸದಸ್ಯತ್ವವನ್ನು ನವೀಕರಿಸಿಕೊಳ್ಳಿ ಹಾಗೂ ಪತ್ರಿಕೆ ನಿರಂತರವಾಗಿ ಪ್ರಕಟಗೊಳ್ಳಲು ಸಹಕರಿಸುವಿರಾಗಿ ನಂಬಿರುತ್ತೇವೆ.

**ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ**
ನಂ. 35, ಸವಿತಾ ನಿಲಯ, 1ನೇ ಕ್ರಾಸ್,
4ನೇ ಬ್ಲಾಕ್, ಜಯಲಕ್ಷ್ಮಿಪುರಂ
ಮೈಸೂರು-570 012

# 42 ಕಿ. ಮೀ. ಮೆರಾಥನ್ ಓಟದ ವೀರ ಶ್ರೀ ಹೊಸೊಕ್ಲು ಅಪ್ಪಚ್ಚು ಚಿಣ್ಣಪ್ಪ

ದಿನಾಂಕ 19-1-97ರಲ್ಲಿ ಅಲಹಾಬಾದಿನಲ್ಲಿ ನಡೆದ 13ನೇ ಆಲ್ ಇಂಡಿಯಾ ಮೆರಾಥನ್ 42 ಕಿ. ಮೀಟರಿನ ಓಟದಲ್ಲಿ 5000 ಓಟಗಾರರಲ್ಲಿ ಹೊಸೊಕ್ಲು ಅಪ್ಪಚ್ಚು ಚಿಣ್ಣಪ್ಪನವರು 7ನೇಯ ಸ್ಥಾನ ಪಡೆದಿದ್ದು, ಇವರಿಗೆ ಉತ್ತರ ಪ್ರದೇಶದ ಕಲ್ಯಾಣ ಮತ್ತು ಕ್ರೀಡಾ ಮಂತ್ರಿಯಾದ ಶ್ರೀ ಶ್ಯಾಮ್‌ಸುಂದರ್ ಶರ್ಮ ರವರು ಫೀಲ್ಡ್ ನ್ಯಾಷನಲ್ ಸರ್ಟಿಫಿಕೇಟ್, ರೂ 3,500 ಮತ್ತು ಟ್ರ್ಯಾಕ್‌ಸೂಟ್ ಕೊಟ್ಟು ಪ್ರೋತ್ಸಾಹಿಸಿದ್ದಾರೆ.

21-12-97ರಲ್ಲಿ 15 ರಾಷ್ಟ್ರಗಳ 30ಸಾವಿರ ಪ್ರತಿನಿಧಿಗಳು ಪುಣೆ ಇಂಟರ್ ನ್ಯಾಷನಲ್ ಮೆರಾಥನ ಓಟದಲ್ಲಿ ಭಾಗವಹಿಸಿದ್ದರು. ಅದರಲ್ಲಿ ಶ್ರೀ ಚಿಣ್ಣಪ್ಪನವರು 10ನೇ ಸ್ಥಾನ ಪಡೆದರು. ಇವರಿಗೆ ಪ್ರಧಾನ ಮಂತ್ರಿ ಐ.ಕೆ. ಗುಜ್ರಾಲ್‌ರವರು ಫೀಲ್ಡ್ ಇಂಟರ್‌ನ್ಯಾಷನಲ್ ಸರ್ಟಿಫಿಕೇಟ್ ಮತ್ತು



ಹೊಸೊಕ್ಲು ಅಪ್ಪಚ್ಚು ಚಿಣ್ಣಪ್ಪ

ರೂ. 2,500 ಕೊಟ್ಟು ಪ್ರೋತ್ಸಾಹಿಸಿದ್ದಾರೆ. ನೀಲಗಿರಿಯ ಎಂಆರ್‌ಸಿ ಕಮಾಂಡೆಂಟ್ ಬ್ರಿಗೇಡಿಯರ್ ಅಜಿತ್‌ಸಿಂಗ್ ಅವರು ರೂ.10,000 ವನ್ನು ಬಹುಮಾನವನ್ನಾಗಿ ಕೊಟ್ಟಿರುತ್ತಾರೆ.

ಇವರು ಕೊಡಗಿನ ಸಿದ್ದಾಪುರದ ಗುಹ್ಯ ಗ್ರಾಮದ ಹೊಸೊಕ್ಲು ಲೇಟ್ ಅಪ್ಪಚ್ಚು ನವರ ಪುತ್ರರಾಗಿದ್ದಾರೆ. ಇವರು ಈಗ ಎಂ. ಆರ್. ಸಿ. ಮೆರಾಥನ್ ಟೀಮಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಮುಂಬರುವ ಏಷ್ಯಾಡ್ ಮೆರಾಥನ್‌ನಲ್ಲಿ ರಾಷ್ಟ್ರಕ್ಕೆ ಭಾಗವಹಿಸಿ ಮೊದಲಸ್ಥಾನವನ್ನು ತಂದುಕೊಡಲೆಂದು ಕೊಡಗು ಗೌಡ ಜನಾಂಗದ ಪರವಾಗಿ ಕೊಡಗು ಸಂಗಾತಿ ಪತ್ರಿಕೆ ತುಂಬುಹೃದಯದಿಂದ ಪರಮಾತ್ಮನನ್ನು ಪ್ರಾರ್ಥಿಸುತ್ತದೆ.

○ ಅಪ್ಪೆಯಂಡ್ರ ಎಸ್. ಲೋಕೇಶ್
ಎಂ.ಆರ್.ಸಿ. ಊಟಿ

# ಬೆರಳಚ್ಚು ಪರೀಕ್ಷೆಯಲ್ಲಿ ತೃತೀಯ ರ್‍ಯಾಂಕ್ ವಿಜೇತೆ ಕು। ಚೋಂಡಿರ ಬಬಿತಾ ಮೊಣ್ಣಪ್ಪ

ಕು॥ ಚೋಂಡಿರ ಬಬಿತಾ ಮೊಣ್ಣಪ್ಪ [ತಿರೋಡಿ] 1997ರ ಡಿಸಂಬರ್ ತಿಂಗಳಲ್ಲಿ ನಡೆದ ಆಂಗ್ಲ ಕಿರಿಯ ಬೆರಳಚ್ಚು ಪರೀಕ್ಷೆ



ಚೋಂಡಿರ ಬಬಿತಾ ಮೊಣ್ಣಪ್ಪ

ಯಲ್ಲಿ ಶೇಕಡ 90.05 ಅಂಕಗಳನ್ನು ಗಳಿಸಿ ಕರ್ನಾಟಕ ರಾಜ್ಯಕ್ಕೆ ತೃತೀಯ ರ್‍ಯಾಂಕ್ ಗಳಿಸಿದ್ದಾಳೆ.

ಇವಳು ಮೇಕೇರಿ ಗ್ರಾಮದ ಶ್ರೀ ಚೋಂಡಿರ ಮೊಣ್ಣಪ್ಪ ಮತ್ತು ಜಯಲಕ್ಷ್ಮಿ ದಂಪತಿಗಳ ಇಬ್ಬರು ಹೆಣ್ಣು ಮಕ್ಕಳಲ್ಲಿ ಇವಳು ಮೊದಲನೆಯವಳು. ಈಗ ಮಡಿಕೇರಿಯಲ್ಲಿ T.C.H. ತರಬೇತಿ ಮಾಡುತ್ತಿದ್ದಾಳೆ. ತಂಗಿ ವಿನುತಾ 1year PUC ಮಾಡುತ್ತಿದ್ದಾಳೆ.ತಂದೆ ಮಂಡ್ಯದ ಸಕ್ಕರೆ ಕಾರ್ಖಾನೆಯಲ್ಲಿ ಉದ್ಯೋಗಿಯಾಗಿರುವರು.

ಇವಳ ಉಜ್ವಲ ಭವಿಷ್ಯಕ್ಕೆ ಜನಾಂಗದ ಪರವಾಗಿ ಕೊಡಗು ಸಂಗಾತಿ ತನ್ನ ಸಂತೋಷವನ್ನು ವ್ಯಕ್ತಪಡಿಸುತ್ತದೆ.

○ ಪಟ್ಟಡ ಪ್ರಭಾಕರ್

[3ನೇ ಪುಟದಿಂದ]

ಮುಳ್ಳಂದೀರ ಭಾಗೀರಥಿ ಇನ್ನು ಮುಂತಾದವರು ಪೊನ್ನಪ್ಪನವರ ಕಾರ್‍ಯದ ಬಗ್ಗೆ ಇಂತಹ ಕೆಲಸ ಮಾಡುವುದು ಅಷ್ಟು ಸುಲಭದ ಮಾತಲ್ಲ. ಎಲ್ಲರು ಮಾಡಲು ಸಾಧ್ಯವು ಆಗುವುದಿಲ್ಲ ಎಂದಿದ್ದಾರೆ. ಇದೇ ಸಂದರ್ಭದಲ್ಲಿ ಕೊಡಗು ಸಂಗಾತಿಯ ಗೌರವ ಸಂಪಾದಕರಾದ ಪಟ್ಟಡ ಪ್ರಭಾಕರ್ ಅವರು ಪೊನ್ನಪ್ಪನವರ ಈ ಕಾರ್ಯ ಇಡೀ ಗೌಡ ಜನಾಂಗಕ್ಕೆ ಒಂದು ಆದರ್ಶಪ್ರಾಯವಾದ ಕೆಲಸ ಎಂದು ಪ್ರಶಂಸಿಸಿದರು.

ಅಮ್ಮಾಜೀರ ಪೊನ್ನಪ್ಪ ನೀಲಾವತಿ ಅವರ ಈ ಮಹತ್ಕಾರ್ಯವನ್ನು ಜನಾಂಗದವರು ಮತ್ತು ಕೊಡಗು ಸಂಗಾತಿಯ ಬಳಗವು ಮೆಚ್ಚಿ ಅವರನ್ನು ದೇವರು ಚೆನ್ನಾಗಿಡಲಿ ಎಂದು ಹಾರೈಸುತ್ತದೆ.

# ವರದಕ್ಷಿಣೆ

ಮಗ- ಡ್ಯಾಡಿ! ಈ ವರ್ಷ ಮದುವೆ ನಂಗೆ ಮಾಡ್ಬೇಕು ।
ಒಳ್ಳೆ ಬೆಳ್ಳಿಯಾಂಗೆ ಬೆಳ್ಗುವ ಹೆಣ್ಣ ಹುಡ್ಕ್‌ಬೇಕು ।
ಅಪ್ಪ– ಏಯ್ ಏನೇಳ್ತಿಯಾ ನನ್ ಮಗನೆ । ನಿಂಗೆ
ಯಾಕಪ್ಪ ಮದುವೆ ಇಷ್ಟು ಬೇಗ್ನೆ ॥
ಮ– ಹದ್ನಾರು ವರ್ಶಗ ಆಯ್ತುನಂಗೆ । ಇನ್ನು
ಮದ್ವೇ ಮಾಡೋದು ಮತ್ತೆ ಯಾವಾಗ್ ನಂಗೆ ।
ಅ– ಇನ್ನತ್ತು ವರ್ಷ ಕಳೆದ ಮೇಲೆ ನಿಂಗೆ । ನಾ
ಮದ್ವೆ ಮಾಡುವೆ ಅದ ನೋಡು ಹೆಂಗೆ ।
ಮ– ಇನ್ನು ಹತ್ತು ವರ್ಷ ತಾಳಲಾರೆ ಓ ಡ್ಯಾಡಿ ।
ನಂಗೆ ಈಗಲೆ ಹೆಣ್ಣು ನೋಡಿ ಮದ್ವೆ ಮಾಡಿ ।
ಡ್ಯಾಡಿ ನೀವ್ ಮಾತಲ್ಲೆ ಹೀಗೆ ನನ್ನ ಮರುಳುಮಾಡಿ
ತಡವೇಕೆ ಮಾಡ್ತಿರೊ ಓ ಡ್ಯಾಡಿ ॥
ಅ– ನೀನೆ ದುಡ್ದು ನಿನ್ ಕಾಲ್‌ಮೇಲೆ ನಿಲ್‌ಬೇಕು।
ಪ್ರಾಯ ಬಂದ ಮೇಲೆ ಮದ್ವೆಯಾಗಬೇಕು ॥
ಮ– ಎಷ್ಟೋ ಹೆಂಗ್ಸರು ದುಡ್ದು ಗಂಡನ ಸಾಕುತ್ತಾರೆ
ಹಾಗೆ ನ್‌ನ್ನ ಹೆಂಡ್ತಿನು ದುಡ್ದು ನನ್ನನ್ ಸಾಕುತ್ತಾಳೆ।
ಅ–ಅಯ್ಯೊ ನಾಚಿಕೆ ಬಿಟ್ಟ ಗಂಡೆ ನೀನೇನೇಳ್ತಿಯಾ
ಹೆಂಡ್ತಿಯ ದುಡ್ಸಿ ದುಡಿಯದೆ ನೀನು ಹೇಗಿರ್ತಿಯಾ
ಹೆಂಡ್ತಿಯು ದುಡ್‌ದ್ರೆ ನಿನಗೂ ದುಡಿಯೋಕೆ ದಾಡಿಯೇನು।
ಹೆಣ್ಣಿಗೊಂದು ಗಂಡಾಗಿದ್ರೆ ಸಾಕೊ ನೀನು ॥
ಹೆಂಡ್ತಿಯು ದುಡ್ದು ತರುವ ಸಂಬ್ಳ ಕಿತ್ತುನೀನೊಬ್ನೆ ತಿಂದ್ರೆ
ತಪ್ಪಾಗಲಾರ್ದು ಹೆಂಡ್ತಿಯೇ ನಿನ್ನ ಪರ್ಕೆಲೊಡದ್ರೆ ಹೊಡ್ದು
ಕೊಂದ್ರೆ ।
ಮ- ಡ್ಯಾಡಿ ಹಾಗಾದ್ರೆ ಒಳ್ಳೆ ವರ್ರಿ ಸಿಕ್ಕುವ ಹೆಣ್ಣು ಹುಡ್ಕ
ಬೇಕು । ನಂಗೀ ವರ್ಷ ಮದ್ವೆ ಮಾತ್ರ ಮಾಡ್ಬೇಕು ॥
ಅ- ಅಯ್ಯೊ ಏನೇಳ್ತಿಯಾ ಹಲ್ಕ ನನ್ ಮಗನೆ
ನಿನ್ನ ಮೊಕಕ್ಕೆ ಆಗೊಲ್ವೇನೊ ನಾಚಿಕೆನೆ ।
ಮಾನ ಮಾರ್ಯಾದಿ ಬಿಟ್ಟು ವರ್ರಿ ಕೇಳೊ ನಿನಗೆ
ತಾಳು ಹೆಂಡ್ತಿಯೆ ಪಾಠ ಕಲಿಸ್ತಾಳೆ ನೋಡು ಕೊನೆಗೆ ॥
ಬುದ್ಧಿರೋರು ವರ್ರಿ ಗಿವ್ರಿ ಕೇಳೊದಿಲ್ಲ
ಮನೆಗೆ ಬಂದ ಹೆಣ್ಣನು ಚಂದದಿ ಕಾಣ್ತಾರೆಲ್ಲ
ಗಂಡ ಹೆಂಡ್ತಿ ಇರ್ತಾರವರು ದೇವರಾಂಗೆ
ಸಂಸಾರದಲ್ಲಿ ಸುಖದ ಕಾಣ್ತಾರು ಬಯಸಿದಾಂಗೆ ।
ಮ-ಕೆಲವು ದೊಡ್ ದೊಡ್ಡವರ ಮಕ್ಳು ಮದ್ವಾಗ್‌ತ್ತಾರೆ
ದುಡ್ಡಿಗಾಗಿ
ನಾವು । ಬಡ್ವರು ಯಾಕೆ ಹೋಗ್ಬಾರ್‌ದವರ ದಾರಿಯಾಗಿ ॥
ಅ- ವರ್ರಿ ತೆಕೊಂಡವ್ರು ಹೆಂಡ್ತಿಯಾಳಾಗಿ ಬಾಳುತ್ತಾರೆ।
ಸಾಯೊತನಕವು ಸೇವೆ ಮಾಡಿಕೊಂಡಿರುತ್ತಾರೆ ।
ಒಳ್ಳೆ ಗುಣದ ಹೆಣ್ಣನು ದುಡ್ಡಿಗೆ ವರಿಸ್ತಾರೆ
ಅತ್ತೆಮಾವರ ಕಣ್ಣಲ್ಲಿ ನೀರು ಸುರಿಸ್ತಾರೆ
ಹೆಣ್ಣನು ಹೆಚ್ಚಿಗೆ ಹಣ ತಾರೆಂದು ಸುಡುತ್ತಾರೆ ।
ಪೋಲಿಸವರ್ನ ಒದ್ದು ಜೈಲಿಗೆ ಹಾಕುತ್ತಾರೆ । ಮತ್ತೆ
ನಾಯಿಯಾಂಗೆ ಪೋಲೀಸವರ್ನ ಕಾಣುತ್ತಾರೆ ।
ಮ– ಅಯ್ಯಯ್ಯಪ್ಪ ವರ್ರಿ ತೆಕೊಂಡ್ರೆ ಹೀಗೊಗತಿ
ಮದ್ವೆಯಾದ್ ಮೇಲೆ ಬೇಡ ಇಂಥ ಹೀನಾಗತಿ ॥
ಅ- ಮಗ್ನೆ! ಒಳ್ಳೆ ಗುಣ ನಡ್ತೆಯ ಹೆಣ್ಣ ಮಾಡ್ವೆ ನಿನಗೆ
ಮರ್ಯಾದಿ ಕಳೆವ ವರ್ರಿ ಪ್ರಶ್ನೆ ಬೇಡಾ ನಮ್ಗೆ
ಮಗನವ ವರ್ರಿಯ ಬಯಸದೆ ಇದ್ದರು
ತಂದೆ ತಾಯಿಯೆ ಮಗನಿಗೆ ಹಠಮಾಡಿ ।
ಹೇಳ್ತರು ಮಗನಿಗೆ ವರ್ರಿಯ ಕೊಳ್ಳದೆ
ಮದುವಾದರೆ ಮನೆ ಬಿಟ್ಟು ನಡಿ ।
ಮ– ತಪ್ಪಾಯ್ತು ಡ್ಯಾಡಿ। ಬೇಡೆನು ನಾನು ಮಾವ ಕೊಡುವಾ
ವರ್ರಿ । ಮದುವೆಗೆ ಒಪ್ಪುವೆ ಸಾಕು ನೀವ್ ನೋಡಿದ ಗುಣ
ನಡತೆಯ ಆ ಗೌರಿ ।ಚಿನ್ನದ ಗುಣದ ಬಡವನ ಮಕ್ಕಳಿಗೆಲ್ಲೊ
ನೆಲೆ। ವರ್ರಿಯ ಕೇಳುವ ಜನಗಳಿಗಿಲ್ಲ ಎಲ್ಲಿಯೂ ಬೆಲೆ ।
ಅ- ಹೆಣ್ಣೆ ನಮ್ಮ ಹಡೆದ ತಾಯಿ ಅಲ್ವೇನೊ ಮಗ್ನೆ ।
ಮತ್ಯಾಕೆ ಅವಳ ಹಣಕೆ ಕೊಳ್ಳುವೆ ಇಲ್ವೆನೊ ಪ್ರಜ್ಞೆ ।
ಮಾತೆಗೆ ಇರುವ ಕೀರ್ತಿ ಮತ್ತೆ ಯಾರೀಗಿದೆ ।
ತಾಯಿಯೇ ದೇವರೆಂಬ ನುಡಿಯು ಹೆಣ್ಣೀಗಿದೆ ।
ಮ–ನನ್ ಗೆಳೆಯನ ಮದುವೆಗೆ ಬೀಗರು ಕೊಟ್ಟರು ।
ಕೈ ತುಂಬಾ ದುಡ್ದು ।
ಈಗಾ ಹೆಂಡ್ತಿಯ ಕಂಡರೆ ಇರುವನು ನಡುಗುತ
ಕಂಬಳಿ ಅವ ಹೊದ್ದು ।
ಅ– ದುಡಿದುಣ್ಣುವ ಆ ಬಡವನು ಕೊಡುವನೆ
ವರ್ರಿಯ ಎಲ್ಲಿಂದ ।
ಬಡವನು ಇನ್ನೂ ಬಡವನೆ ಆಗ್ವನು ಈ
ಈ ವರ್ರಿಯ ದೆಸೆಯಿಂದ

[ಮುಂದುವರಿಯುವುದು]

○ ಹೊದ್ದೇಟ ಭವಾನಿಶಂಕರ್

# ನಿಮ್ಮ ಪತ್ರಗಳು

### ಅನುಕೂಲ ಮಾಡಿ ಕೊಡಿ

ಮಾನ್ಯರೆ,

ಕೊಡಗು ಜಿಲ್ಲಾ ಗೌಡ ಸಮಾಜದ ವಿವಿಧ ಸಂಘ ಸಂಸ್ಥೆಗಳ ಕಾರ್ಯಕಾರಿ ಮಂಡಲಿಯವರುಗಳು ಕಾರ್ಯಕ್ರಮಗಳನ್ನು, ಸಭೆ ಸಮಾರಂಭಗಳನ್ನು ನಡೆಸುವ ದಿನಾಂಕಗಳನ್ನು ನಿರ್ಧಾರ ಮಾಡುವ ಮೊದಲು ಜಿಲ್ಲೆಯ ನಮ್ಮ ವಿವಿಧ ಸಂಸ್ಥೆಗಳ ಪದಾಧಿಕಾರಿಗಳನ್ನು ಕರೆದು ದಿನಾಂಕವನ್ನು ನಿರ್ಧಾರ ಮಾಡಿದರೆ ಜನಾಂಗದ ಎಲ್ಲಾ ಸದಸ್ಯರುಗಳು ಸಭೆ, ಸಮಾರಂಭಗಳಲ್ಲಿ ಭಾಗವಹಿಸಲು ಸಾಧ್ಯವಾಗುತ್ತದೆ. ಇಂತಹ ದಿನಾಂಕದ ಬಗ್ಗೆ ಸಂಘ–ಸಂಸ್ಥೆಗಳು ಗಮನ ಹರಿಸಿ ಜನಾಂಗದ ಸದಸ್ಯರುಗಳಿಗೆ ಅನುಕೂಲ ಮಾಡುವಂತೆ ಮಾಡಿ ಮುಂದೆ ಕ್ರಮ ಕೈಗೊಳ್ಳುತ್ತೀರಿ ಎಂದು ನಂಬಿರುತ್ತೇನೆ.

○ ಪಂಜಿಪಳ್ಳ ವೆಂಕಪ್ಪ, ಉಪಾಧ್ಯಕ್ಷ
ಗೌಡ ವಿದ್ಯಾ ಸಂಘ, ಮಡಿಕೇರಿ

### ಅದೇ ಉಡುಪು ಧರ್ಸಲಿ

ಮಾನ್ಯರೆ,

1998ರ ಜನವರಿ ತಿಂಗಲ್ಲಿಗೌಡ ಸಾಂಸ್ಕೃತಿಕ ಅಕಾಡಮಿಲಿ ನಡ್ದ ಕಾರ್ಯಕ್ರಮ ತುಂಬಾ ಖುಷಿಯಾತ್. ನಮ್ಮ ಹಳೇ ನಡ್‌ಪು, ಉಡಿಗೆ–ತೊಡಿಗೆ ಪ್ರದರ್ಶಿಸ್‌ಕನ ತುಂಬಾ ಖುಷಿಯಾತ್. ಅದರ್ಲಿ ಒಂದ್ ಮೊದುವೆ ಕಾರ್ಯಕ್ರಮದ ಗಂಗೆ ಪೂಜೆ. ಆ ನಾಟಕ ತುಂಬಾ ಖುಷಿಯಾತ್. ಕಾರಣ ಇನ್ನ್ ತುಂಬಾ ಮೊದುವೆಗ ಶುರು ಆದವೆ. ಆ ನಾಟಕಲಿ ಗಂಗೆ ಪೂಜೆ ಮಾಡ್‌ಕನ ಮೊದೊಳಿಗೆ ಗೇಂಟೆ ಸೀರೆ ಉಟ್ಟ್ ಅಡೊಳಿ ಗೇಂಟೆಗೆ ಉಟ್ಟ್ ಕಂಚಿಮಿ ಹಿಡ್‌ದವು ಸಹ ಗೇಂಟೆ ಉಟ್ಟ್, ತಲೆಗೆ ಕೋರ್ ಚೌಕ ಕಟ್ಟಿದ್ ನೋಡಿಕೆ ತುಂಬಾ ಖುಷಿ ಆತ್ ಇನ್ನ್ ಮುಂದೆ ಅಡೊಳಿ ಸ ತಲೆಗೆ ಕೋರ್ ಚೌಕ ಕಟ್ಟಕು. ಇದ್ಕೆ ಉಳುವಾರನ ಶೀಲಾ ಪೊನ್ನಪ್ಪ ಅವರ ನಾಟಕನೆ ಉದಾಹರಣೆ. ಅದರ್‌ಂದ ಮೊದೂಳಿಗೆನಂಗೆ ಅಡೊಳಿ, ಕಂಚಿಮಿ ಅದೇ ಉಡುಪು ಧರ್ಸಲೀಂತ ನಾವು ಜನಾಂಗದವರ್ನ ಕೇಳಿಕಂಡವೆ.

○ ಅಕಾಡೆಮಿಲಿ ನೋಡ್ದ ಪ್ರತ್ಯಕ್ಷ ದರ್ಶಿಗ 'ಕರ್ಣಯ್ಯನ'...

### ಕ್ರೀಡಾ ಅಂಕಣ

ಮಾನ್ಯರೆ,

ತಮ್ಮ ಪಾಕ್ಷಿಕ ಪತ್ರಿಕೆ "ಕೊಡಗು ಸಂಗಾತಿ" ವಿಸ್ಮಯವಾಗಿ ಮೂಡಿ ಬರುತ್ತಿದೆ. ಇದರಲ್ಲಿ 'ಕ್ರೀಡಾ ಅಂಕಣ' ಒಂದನ್ನು ಮುದ್ರಿಸಿದರೆ ಸಂಗಾತಿಯ ಮೆರಗು ಮೇರು ಪರ್ವತಕ್ಕೇರಿತು. ಗೌಡ ಜನಾಂಗದಲ್ಲಿ ಕ್ರೀಡಾ ಲೋಕದಲ್ಲೂ ಅದೆಷ್ಟೋ ನಕ್ಷತ್ರ ಮಿನುಗಿವೆ. ಮುಂದಿನ ಸಂಚಿಕೆಯಲ್ಲಿ ಕ್ರೀಡಾ ಅಂಕಣವೊಂದನ್ನು ಪ್ರಕಟಗೊಳಿಸುತ್ತೀರಿ ಎಂದು ಆಶಿಸುತ್ತೇನೆ.

○ ಕ್ರೀಡಾಪ್ರೇಮಿ

### ಯಶಸ್ಸು ಪಡೆಯಲಿ

ಮಾನ್ಯರೆ,

ನಮ್ಮ ಗೌಡ ಸಮಾಜಕ್ಕೆ ಸೂಕ್ತಮಾರ್ಗದರ್ಶನ ನೀಡಿ, ಗೌಡ ಯುವಕ ಯುವತಿಯರಿಗೆ ಉನ್ನತವಿದ್ಯಾಭ್ಯಾಸ ಮಾಡಲು ಪ್ರೋತ್ಸಾಹ ನೀಡುವಂತಹ ವಿಷಯಗಳನ್ನು ಪ್ರಕಟ ಮಾಡಲು ನಿಮ್ಮಲ್ಲಿ ಕೇಳಿಕೊಳ್ಳುತ್ತೇನೆ.

○ ಯಾಲದಾಳು ಚಂದ್ರಕಲಾ, ಮಡಿಕೇರಿ

### ಹೆಚ್ಚು ಅರ್ಥಪೂರ್ಣ

ಮಾನ್ಯರೆ,

ಗೌಡ ಜನಾಂಗದ ಸರ್ವಾಂಗೀಣ ಅಭಿವೃದ್ಧಿಗಾಗಿ ಅರೆ ಭಾಷಿಕಾ ವಿಭಾಗದಲ್ಲಿ ಪ್ರಕಟವಾಗುತ್ತಿರುವ ಹೆಚ್ಚಿನ ಎಲ್ಲಾ ಪುಟಗಳು ಅರ್ಥಪೂರ್ಣವಾಗಿರುತ್ತದೆ. 'ಕೊಡಗು ಸಂಗಾತಿ' ಪತ್ರಿಕೆಯನ್ನು ಪ್ರತಿಯೊಬ್ಬ ಗೌಡ ಜನಾಂಗದವರು ತಪ್ಪದೆ ಓದಲೇಬೇಕಾದ ಪತ್ರಿಕೆಯಾಗಿದೆ.

○ ಕೆ. ಎಸ್. ಬಾಲಕೃಷ್ಣ, ದಬ್ಬಡ್ಕ ಗ್ರಾಮ

### ವಿಸ್ತಾರವಾಗಿ ಬೆಳೆಯಲಿ

ಅರೆಭಾಷೆ ವಿಸ್ತಾರವಾಗಿ ಬೆಳ್ದ್ ದೇಶದ ಎಲ್ಲಾ ಕಡೆ ಹಬ್ಬಲಿ. ಅದಿಕೆ ನಮ್ಮ ನಿಮ್ಮೆಲ್ಲವರ ಸಹಕಾರ ಇರಕು. ಈಗ ನಮ್ಮ ಭಾಷೆ ಕೊಡಗು ಸಂಗಾತಿ ಎಂಬ (ಮಲ್ಲಿಗೆ) ಬಳ್ಳಿ ಹಬ್ಬಿ, ಕರ್ನಾಟಕ ಸಂಗಾತಿಯಾಗಿ, ವಿಸ್ತಾರವಾಗಿ ಬೆಳ್ದ್, ಇಂಡಿಯಾ ಸಂಗಾತಿ ಆಗಿ ಹೊಸ ಚಿಗರ್ ಬಂದ್ ಮೊಗ್ಗ್‌ಹೂವಾಗಿ, ಆ ಹೂ ಅರಳಿ ಫಾರಿನ್ ಸಂಗಾತಿಯಾಗಿ ಬೆಳೆಯಲಿ.

○ ಕುಂಜಿಲನ ರಾಜು, ಕುಂಬಳದಾಳ

# ಕರಿ ಚಿನ್ನ

## ಅರೆ ಭಾಷಿಕ ವಿಭಾಗ

**ಧಾರಾವಾಹಿ 1**

ಮೂಲಕಥೆ : ಅಶ್ವಥ ಅರವಿಂದ್
ಅರೆಭಾಷೆಗೆ : ಎಂ.ಇ. ಮುಹಮದ್

**ಸೂ**ರ್ಯ ಮುಳುಗೊ ಹೊತ್ತ್. ಒಳ್ಳೆ ಕ್ವಾಟ ಗಾಳಿ ಬೀಸ್‌ತ್ತಿತ್ತ್. ವಾತಾವರಣ ಯಾವ ಗಳಿಗೆಲಿ ಬೇಕರೆ ಮಳೆಬೀಳ್ವಂಗೆ ಉಟ್ಟ್. ಒಂದ್ ಮಿಂಚಿನ ಒಟ್ಟ್‌ಗೆ ದಡ್‌ಬಡಾಂತ ಭೂಮಿನ ಭಾಗ ಮಾಡ್ವಂಗೆ ಒಂದ್ ಸಿಡ್ಲ್‌ಹೊಡ್ತ್. "ಸ್ವಾಮಿ ವೆಂಕಟರಮಣಾ...." ಹೆದ್‌ರ್ದ ಮೀರ ಗೂಡೆ ದೇವ್ರುನ ಕರ್ತ್. ಅವಳ ಅಂಗಾಲಿಂದ ನೆತ್ತಿ ಗಂಟ ಜುಂ ಅಂತ ನಡ್ಗಿಕೆ ಸುರಾತ್. ಪುಸ್ತಕ ಎದೆಗೆ ಒತ್ತಿ ಹಿಡ್ದ್ ಅವಳು ರಭಸಂದ ನಡೀತಿತ್ತ್.

ಮೀರ ಭಾಗಮಂಡಲ ಪದವಿ ಪೂರ್ವ ಕಾಲೇಜ್‌ಲಿ ಬಿ. ಎ. ಓದಿಕಂಡುಟ್ಟ್. ಅಂದ್ ಒಂದ್ ರಾಜಕೀಯ ಪಕ್ಷದ ಮುಖಂಡ ಕೊಲೆಯಾದ ದಿನ. ಟೌನ್‌ಲಿ ಎಲ್ಲ ಕಡೆ ಪಿಕೆಟಿಂಗ್,ಬಸ್‌ತಡೆ, ಮೆರವಣಿಗೆ ಹಿಂಗಾಗಿ ಬಸ್ ಬಾದು ಸ್ವಲ್ಪ ತಡ ಆತ್. ಐದ್‌ಗಂಟೆಗೆ ಬರಕಾದ ವಿಜಯಲಕ್ಷ್ಮಿ ಬಸ್ ಆರ್‌ಕಾಲಿಗೆ ಬಾತ್.

ಬಸ್ ಇಳ್ದ್ ಮೀರ ಮನೆಕಡೆ ಹೋಗೊವು ಯಾರಾದ್ರು ಒಳೊಂತ ಸುತ್ತ ಒಮ್ಮೆ ಕಣ್ಣ್ ಬುಟ್ಟ್ ನೋಡ್ತ್. ಯಾರ್‌ಸಾ ಕಾಂಬದ್ಲೆ.

ಅಷ್ಟೊತ್ತಿಗೆ.... ಅವ್ಳ ನೆರಮನೆಯಂವ ಬೋರುಗುಡ್ಡೆ ದೇವಯ್ಯನ ಬಿಳಿ ಮಾರುತಿ ಕಾರ್ ಅವಳ ಹತ್ರ ಬಂದ್ ನಿತ್ತತ್.ಅವನ ಕಾಂಬದು ಮೀರಂಗೆ ಹಾವು ಮೆಟ್ಟಿದಂಗೆ ಆತ್. ದೇವಯ್ಯನ ಕುರ್‌ನರಿ ಬುದ್ಧಿ ಮೀರಂಗೆ ಗೊತ್ತುಟ್ಟ್.

"ಬಂದಿಯನೆ ಗೂಡೆ, ಏ ಮೀರಾ, ಮಳೆ ನೆನೀದಂಗೆ ಮನೆಗೆ ಬುಟ್ಟನೆ " ದೇವಯ್ಯ ಕೇಳ್ತ್.

ದೇವಯ್ಯ ಕೇಳ್‌ಕಾಕನ ಮೀರ ಉಸ್‌ರ್ ಬುಟ್ಟಿತ್‌ಲೆ.

'ಈ ಕತ್ಲೇಲಿ ಮಳೆನೆಂದ್ ಚಳಿ ಜರ ಬರದಿರ್ಲೀತ ಕರೀತ ಒಳೆ. ನನ್ನ ಮೇಲೆ ನಿಂಗೆ ನಂಬಿಕೆ ಇದ್ದರೆ ಹತ್ತ್'

ಮೀರ ಹೆದರಿಕಂಡ್ ನಿತ್ತತ್.

'ಯಾಕೆನೇ ಹಂಗೆ ಆಡಿಯಾ, ನಾನ್ಯಾರ್ ಮೂಡ್‌ಸೀಮೆಂದ ಬಂದಂವಾಂತ ಗ್ಯಾನ ಮಾಡ್ದ ?'

ದೇವಯ್ಯ ಡ್ರೈವರ್ ಸೀಟ್‌ಂದ ತಲೆನ ಹೊರ್ಗೆ ಹಾಕಿ ಹೇಳ್ತ್.

ಅದೇ ಹೊತ್ತ್‌ಗೆ ಪಿರಿಪಿರಿ ಮಳೆನೂ,

### -: ಅನುವಾದಕರ ಪರಿಚಯ :-

ಶ್ರೀ ಎಂ.ಇ. ಮುಹಮದ್ ಅವರು ಮಡಿಕೇರಿ ಭಗವತಿ ನಗರದ ನಿವಾಸಿ ಎಂ. ಕೆ. ಇಬ್ರಾಹಿಂ ಅವರ ಪುತ್ರ.

ಇವರು ಕೊಡಗಿನ 'ಶಕ್ತಿ' ದಿನ ಪತ್ರಿಕೆಯಲ್ಲಿ ಉಪ ಸಂಪಾದಕರಾಗಿ ಪ್ರಧಾನ ಉಪ ಸಂಪಾದಕರಾಗಿ ಎಂಟು ವರ್ಷಗಳ ಕಾಲ ಕರ್ತವ್ಯ ನಿರ್ವಹಿಸಿದ್ದು, ಅನೇಕ ಮಲೆಯಾಳ ಧಾರಾವಾಹಿಗಳನ್ನು ಕನ್ನಡಕ್ಕೆ ಮತ್ತು ಕೊಡವ ಭಾಷೆಗೂ ಅನುವಾದಿಸಿದ್ದಾರೆ. ಕರಿ ಚಿನ್ನ ಇವರು ಇದೇ ಮೊದಲ ಬಾರಿಗೆ ಅರೆಭಾಷೆಗೆ ಅನುವಾದಿಸುತ್ತಿರುವ ಮಲೆಯಾಳಂ ಕಾದಂಬರಿ.

ಶ್ರೀಯುತರು ಪ್ರಸ್ತುತ ಕೊಡಗಿನಲ್ಲಿ 'ಫಿರ್ದೌಸ್' ಎಂಬ ಮುಸ್ಲಿಂ ಕೌಟುಂಬಿಕ ವಾರಪತ್ರಿಕೆಯೊಂದನ್ನು ಸ್ವತಃ ನಡೆಸುತ್ತಿದ್ದು ಅದರ ಸಂಪಾದಕರಾಗಿ ಕರ್ತವ್ಯ ನಿರ್ವಸುತ್ತಿದ್ದಾರೆ. ಜಿಲ್ಲೆಯ ಕೆಲವು ಪತ್ರಿಕೆಗಳಲ್ಲಿ ಮುಹಮದ್ ಅವರು ಅನುವಾದಿಸಿರುವ ಧಾರಾವಾಹಿಗಳು ಈಗಲೂ ಪ್ರಕಟಗೊಳ್ಳುತ್ತಿವೆ.

ಮಡಿಕೇರಿಯಲ್ಲೇ ಹುಟ್ಟಿ ಬೆಳೆದ ಇವರು ಏಳನೇ ತರಗತಿಯವರಗೆ ಮಾತ್ರ ಓದಿದ್ದು, ಕನ್ನಡ,ಕೊಡವ,ತುಳು, ಅರೆಭಾಷೆ, ಮಲೆಯಾಳಂ ಭಾಷೆಗಳಲ್ಲಿ ಓದಲು, ಬರೆಯಲು ಬಲ್ಲವರಾಗಿದ್ದು, ತಮಿಳು ಕೂಡ ಮಾತನಾಡ ಬಲ್ಲರು.

ಬಾಲ್ಯದಿಂದಲೇ ಕೊಡವ-ಗೌಡ ಜನಾಂಗಬಾಂಧವರ ಗೆಳೆತನ ಬೆಳೆಸಿದ್ದುದರಿಂದ ಮುಹಮದ್ ಅವರಿಗೆ ಈ ಎರಡು ಭಾಷೆಗಳನ್ನು ಕಲಿಯಲು ಸುಲಭಸಾಧ್ಯವಾಯಿತು. ಇವರು ಮೂಲತಃ ದಕ್ಷಿಣ ಕನ್ನಡ ಜಿಲ್ಲೆಯ ಬ್ಯಾರಿ ಜನಾಂಗಕ್ಕೆ ಸೇರಿದವರು.

—ಸಂ.

ಜೊತೆಗೆ ಜೋರಾಗಿ ಗಾಳಿ ಕೂಡ ಬೀಸಿಕೆ ಸುರಾತ್. ಸುತ್ತ ಪೂಳ ಮುಚ್ಚಿಕಂಡ್ ಒಂದೂ ಕಾಂಬದುಲ್ಲೆ, ಎಲ್ಲಿ ನೋಡ್ರೂ ಪೂಳ ಮಾತ್ರ ಕಾಣ್ತಿತ್ತ್.

"ಬಂದಿಯಾ ಅಲ್ಲ ನಾನ್ ಹೋಗ್ಲಾ ? ಬೇಗ ಹೇಳ್''.

ವಿರಾರಂಗೆ ಎಂತ ಮಾಡಕೂತ ಗೊತ್ತಾತ್ಲೆ. ಜೆನಗ ಇಲ್ಲದ ರೋಡು, ಜೊತೆಗೆ ಕತ್ಲೆ ಬೇರೆ, ಜೋರು ಗಾಳಿ ಬೀಸ್ತಾ ಇತ್ತ್, ಮಳೆನೂ ಬರ್ತಾ ಇತ್ತ್. ಅದರ್ನೆಲ್ಲ ಗ್ಯಾನ ಮಾಡಿ ವಿರಾರಂಗೆ ಹೆದ್ರಿಕೆ ಸುರಾತ್. ಅವ್ಳು ಒಂದ್ ನಿಸ್ಸು ಎಂತದೋ ಗ್ಯಾನ ಮಾಡಿಬುಟ್ಟ್ ಮತ್ತೆ ಕಾರಿಗೆ ಹತ್ತಿತ್.

'ಹ್ಷ್ಣಂ ನಿಂಗೆ ನನ್ನ ಪ್ಯಾಲೆ ನಂಬಿಕೆ ಉಟ್ಟೊತಾತ್ ?'

ಅವ್ಳ ಮೊಕ ನೋಡ್ಕಂಡ್ ಹೇಳ್ದ ದೇವಯ್ಯ ಕಾರ್‌ನ ವೈಪರ್ ಹಾಕಿ ಒಳಗೆ ಹೊರಗೆ ಲೈಟ್ ಹಾಕಿತ್.

ತುಂಬಿ ತುಳ್‌ಕ್‌ತಾ ಇದ್ದ ವಿರಾರನ ಪೊರ್ಲ್‌ನ ನೋಡ್ಕಂಡ್ ದೇವಯ್ಯ ಕಾರ್ ಸ್ಟಾರ್ಟ್ ಮಾಡ್ತ್

ಬೋರುಗುಡ್ಡೆ ದೇವಯ್ಯ ಸಾಮಾನ್ಯ ಆಸಾಮಿ ಅಲ್ಲ. ಅಂವ ಮಾತ್‌ಕತೆಲಿ, ಕಾರ್‌ಬಾರ್‌ಲಿ ಎಲ್ಲ ಒಬ್ಬ ರೌಡಿನೇ ಆಗಿತ್ತ್.

ಆರಡಿ ಎತ್ತರ, ಎತ್ತರಕ್ಕೆ ಸರಿಯಾದ ದಪ್ಪ, ಕೆಂಗಣ್ಣ್, ದಪ್ಪ ಮೀಸೆ, ದೊಡ್ಡ ಸ್ವರ, ನೋಡ್ದವಂಗೆ ಹೆದ್ರಿಕೆ ಆಗುವ ತಡಿ.

ಅಂವ ಎಳ್ಳ್‌ನ ಏಳ್ ಚೂರ್ ಮಾಡುವಂತ ಜಿಪುಣ ಸಾಹುಕಾರ. ಒಂದ್ ರೂಪಾಯಿ ಹಾಕಿ ಒಂಭತ್ತ್ ರೂಪಾಯಿ ಲಾಭ ಮಾಡ್ವ ಆಸಾಮಿ. ಸಮಯ ಸಂದರ್ಭ ಸಿಕ್ಕಿರೆ ಯಾವ ಗೂಡೆಗ ಸಿಕ್ಕಿರೂ ಅನುಭವಿಸದೆ ಬುಡಂವ ಅಲ್ಲ. ಅವನಕ್ಕಲೆ ಸಹಾಯ ಕೇಳಿಕಂಡ್ ಬಂದ ಗೂಡೆಗಳ್ನ ಸುಮ್ಮನೆ ಬುಟ್ಟವನೇ ಅಲ್ಲ.

ಇಪ್ಪತ್ತ್ ವರ್ಷದ ಹಿಂದೆ ಬೋರು ಗುಡ್ಡೆಗೆ ಹಾಕಿದ ಬಟ್ಟೆಲಿ ಬಂದ ದೇವಯ್ಯ ಪಾರೆಸ್ಟ್‌ಲಿ ಮರಕಡ್ದ್, ಸುಟ್ಟ್ ಮಸಿ ಮಾಡಿ ಮಾರಿಕೆ ಸುರ್ ಮಾಡ್ತ್. ಅಲ್ಲಿಂದ ಕಳ್ಳ್ ಕಾಸಿಕೆ ಕೈ ಹಾಕಿತ್. ಗಂಧ ಕದಿಯಕೆ ಹೋತ್, ಹಿಂಗೆ ಆನೆ ಕೊಂಬು ಗಂಟ ಅವನ ಯಾಪಾರ ಸಾಗಿತ್.

ಹಣ ಕೂಡಿಕಂಡ್ ಬಂದಂಗೆ ಅವಂಗೆ ದೊಡ್ಡದೊಡ್ಡ ಜೆನಗಳ ಪರಿಚಯ ಆತ್. ಕಳ್ಳ್ ಮಸಿ ಯಾಪಾರನ ಬುಟ್ಟ್ ಅಂವ ಡೀಸೆಂಟ್ ಯಾಪಾರಕೆ ಕೈ ಹಾಕಿತ್.

ದೇವಿ ಫೈನಾನ್ಸ್, ದೇವಿ ಮೋಟಾರ್ ಸರ್ವೀಸ್, ದೇವಿ ಪೆಟ್ರೋಲ್‌ಬಂಕ್, ದೇವಿ ಟೂರಿಸ್ಟ್ ಹೋಂ ಹಿಂಗೆ ಐದಾರ್ ಸಂಸ್ಥೆಗೆ ಅಂವ ಜನ್ಮ ಕೊಟ್ಟತ್, ಪ್ರತಿಯೊಂದು ಸಂಸ್ಥೆಗೂ ಒಬ್ಬೊಬ್ಬ ಮೇನೆಜರ್‌ನ ಕೆಲ್ಸಕೆ ಇಟ್ಟತ್.

ಇಂದ್ ರಾಜಕೀಯ ಪುಡಾರಿಗ ಸಮಾಜದ ಗಣ್ಯ ವ್ಯಕ್ತಿಗ, ಪೊಲೀಸ್ ಆಫೀಸರ್‌ಗ ಎಲ್ಲವು ಬೋರುಗುಡ್ಡೆ ದೇವಯ್ಯನ ಗೆಳೆಯರ್.

ದೇವಯ್ಯಂಗೆ ಇಬ್ಬರ್ ಮಕ್ಕ. ರಂಜನ್ ಮತ್ತೆ ಜೀವನ್. ರಂಜನ್‌ಗೆ ಹೈಸ್ಕೂಲ್ ದಾಟಿಕೆ ಆತ್ಲೆ. ಅದ್ ಅವನ ತಪ್ಪಲ್ಲ. ಅಂವ ಒಂದ್ ದಿನ ಸ್ಕೂಲ್‌ಗೆ ಹೋನೇತ ಹೇಳಿ ಹೊರ್ಡ್‌ಕನ ದೇವಯ್ಯ ತಡ್ದ್ ಹೇಳ್ತ್.

'ನಿನ್ನ ಒಂದ್ ಸ್ಕೂಲ್, ಹೋಗಿ ಕೆಲ್ಸ ನೋಡು, ನಿಂಗೆ ಗೊತ್ಲೆತಾದ್ರೆ ನನ್ನ ಕೇಳ್ ಹೇಳಿಕೊಟ್ನೆ. ಒಂದ್ ಪುಸ್ತಕ ಬೇಕರೆ ಯಾರೂ ಕೊಟ್ಟವೆ, ಅದೇ ಒಂದ್ ಹತ್ತ್ ರುಪಾಯಿ ಕೇಳ್ ನೋಡ್ನು ಸಿಕ್ಕಿ ಬುಡ್ದು. ಯಾರ್‌ಸಾ ಸುಮ್ಮನೆ ಕೊಡ್ದುಲೆ, ಈಗ ಹೇಳ್ ನೋಡ್ನು, ಪುಸ್ತಕ ದೊಡ್ಡದಾ, ಹಣ ದೊಡ್ಡದಾತ ? ಮೊದ್ಲ ನಾಕ್ ಕಾಸ್ ಮಾಡಿಕೆ ಕಲಿ. ಮತ್ತೆ ನೋಡು ಬಿ.ಎ., ಎಂ.ಎ., ಕಲ್ತವು ತೀರ ನಿನ್ನ ಹಿಂದೆ ತಲೆ ಕೆರ್ಕಂಡ್ ಸುತ್ತುತ್ತಾ ಇದ್ದವೆ.

ಅಂವ ಅಸ್ಟ್ ಹೇಳ್‌ಕಾಕನ ಚಿನ್ನಮ್ಮ ಒಳಗಿಂದ ಬಾತ್.

"ಈ ಕಾಲಲಿ ವಿದ್ಯೆ ಇಲ್ಲದಿದ್ರೆ ಬದ್ಕುದೇ ಕಷ್ಟ ಮಜ. ನಿನ್ನ ಪೊಪ್ಪಂಗೆ ಎಂತ ಗೊತ್ತ್? ನೀನ್ ಪೊಪ್ಪನ ಮಾತ್‌ಕೇಳ್ಬಡ. ಕಾಡ್ ಮನುಷ್ಯ ಸ ಈಗ ಬಿ.ಎ., ಎಂ.ಎ. ಕಲ್ತ್ ಸೂಟ್ ಹಾಕಿ ನಡಿವ ಕಾಲ ಇದ್"

ಚಿನ್ನಮ್ಮನ ಮಾತ್ ಕೇಳಿ ದೇವಯ್ಯಂಗೆ ಸಿಟ್ಟ್ ಬಾತ್.

ನೀನ್ ಹೋಗಿ ಕೆಲ್ಸ ನೋಡು, ಬುದ್ ಬುಡ್ತ್ ಇವ್ಳ ದೊಡ್ಡ ಓದಿದವಳಂಗೆ"

ದೇವಯ್ಯ ಹೆಣ್ಣ್‌ಗೆ ಜೋರ್ ಮಾಡ್ತ್.

ಸಣ್ಣವ ಜೀವನ್ ಕಾಲೇಜಿಗೆ ಹೋಕನ ದೇವಯ್ಯ ತಡಿಯತಿತ್ತ್‌ಲೆ. ಅಂದರೆ ಅಂವ ಅಪ್ಪನ ಮಾತಿಗೆ ಕಿವಿ ಕೊಟ್ಟತ್ಲೆ.

"ಪೊಪ್ಪಾ, ಹಣಕಿಂತ ವಿದ್ಯೆದೊಡ್ಡದ್. ಅದ್ರ ತಿಳಿಯೋಕಾದ್ರೆ ವಿದ್ಯೆಕಲ್ತವನಾಕು".

ಮಜನ ಮಾತ್ ಕೇಳ್ದ ದೇವಯ್ಯಂಗೆ ಈಗ ಏನ್ ಹೇಳಕೂತ ತಿಳಿಯದೇ ಹೋತ್.

ಜೀವನ್‌ಕಾಲೇಜಿಗೆ ಸೇರ್ತ್. ಅಂವ ಈಗ ಬೆಂಗಳೂರು ಕಾಲೇಜಿಲಿ ಎಂ.ಎ. ಓದ್ತಾ ಉಟ್ಟು.

* * * *

ದೇವಯ್ಯ ಸೆರಿ ದಾರಿನ ಬುಟ್ಟ್‌ಕಾರ್‌ನ ಅಡ್ಡದಾರಿಲಿ ಒಡ್ಸಿಕೆ ಸುರ್ ಮಾಡ್ತ್.

ಅದರ್ನ ಕಂಡ್ ಗಾಬರಿ ಆದ ವಿರಾರ ಕೇಳ್ತ್.

"ನೀವ್ ಯಾವ ಕಡೆ ಹೋಗ್ತ್ ಒಳ್ರಿ ಅಂಕಲ್ ?"

"ಯಾವ ಕಡೆ ಹೋದ್ರೆ ನಿಂಗೇನ್. ಡ್ರೈವ್ ಮಾಡ್ತ್ ಇರ್ದು ನಾನ್ ತಾನೆ. ಅಲ್ಲಾಗಡ್ದೆ ಸುಮ್ನೆ ಕುದ್ದ್‌ಕ"

ಅವನ ಮಾತ್‌ಕೇಳಿ ವಿರಾರಂಗೆ ಹೆದ್ರಿಕೆ ಆತ್

[ಮುಂದಿನ ಸಂಚಿಕೆ ನೋಡಿ]

## ನಂಟ್ರಮನೆಗೆ ಈಗ ಹೋಕಾಗದ್

**ಮ**ಕ್ಕಳಿಗೆ ಪರೀಕ್ಷೆ ಬಂದೇ ಬುಡ್ತ್. ಇಡೀ ವರ್ಷ ಕಲ್ತರ ಮೂರೇ ಮೂರು ಗಂಟೇಲಿ ಬರ್ಡ್ವರೆ ಆತ್. ಆ ಮೂರು ಗಂಟೇಲಿ ಬರ್ದ್ವರ ಮೂರೇ ಮೂರು ನಿಮಿಷಲಿ ಹಣೆಬರಹ ಹೇಳಿಬುಟ್ಟವೇ.

ಕೆಲ ಮಕ್ಕ ಪರೀಕ್ಷೆ ಹತ್ರ ಬಾತ್ ಬಾತ್‌ಂತೇಳ್ಕನ ಕಾಯಿಲೆ ಬಿದ್ದ್‌ಬುಟ್ಟವೆ. ಕೆಲವುಕೆ ಹೆದ್ರಿಕೆ. ಯಾಕೆ ಹೆದ್ರಕು? ಲಾಯ್ಕ ಓದಿಕಂಡ ಮೇಲೆ ಹೆದ್ರಕುಂತೆನೂ ಇಲ್ಲೆ. ಪರೀಕ್ಷೆ ನಾಳೆಂತೇಳ್ಕನ ಇಂದ್ ಬಾಯಿ ಬಾಯಿ ಬಡ್ಕಂಬದಲ್ಲ. ಅದ್ ಓದುದಾ, ಇದ್ ಓದುದಾಂತ ಗ್ಯಾನ ಮಾಡಿಕಂಡೆ ಕಡೆಗೆ ಯಾವ್ದೂ ಓದಿಕಾಗದೆ ನರಕ ಬರುವ ಮಕ್ಕ ಎಷ್ಟಿಲ್ಲೆ? ಕೆಲವು ಸ್ಕೂಲ್‌ಲಿ ಪರೀಕ್ಷೆಗೆ 15ದಿನ ಅಥ್ವಾ 1 ತಿಂಗ ಮುಂದೆ ಓದಿಕೇಂತ ರಜ ಬುಟ್ಟವೇ. ಮಕ್ಕ ಎಲ್ಲಿ? ಎಲ್ಲಾ ಅಲ್ಲಿ ಇಲ್ಲಿ ನೆಂಟ್ರಮನೆಲಿ, ಆ ಊರು ಹಬ್ಬ ಈ ಊರು ಹಬ್ಬಂತ ಹಬ್ಬದ ಊರಿಗೆಲ್ಲಾ ಹೋಬುಟ್ಟವೆ. ಮನೆವು ಎಚ್ಚರ ಮಾಡೊಕು. ಪರೀಕ್ಷೆ ಸಮಯಲಿ ಮಕ್ಕ ಮನೆ ಮನೆ ಸುತ್ತಿರೆ ಎರಡೂ ಮನೆ ಮಕ್ಕಳೂ ಹಾಳಾದವೆ. ಹಂಗೇಂತೇಳಿ ಅಪ್ಪ ಅಪ್ವ ನೆಂಟ್ರ ಮನೆಗೆ ಹೋಕಾ? ಇಲ್ಲೆ ಮಕ್ಕಳ ಪರೀಕ್ಷೆ ಆಗುವವರೆಗೆ ಅಪ್ಪ ಪಪ್ವನೂ ಹೋಕಾಗದ್. ಕೆಲವುಕೆ ಸಿಟ್ಟ್ ಬಾದು. ನಾವು ನಂಟ್ರಮನೆಗೆ ಹೋವರೆ ನೀವ್‌ಗೇನ್‌ಂತ? ಆದರೆ ತಿಳುವಳಿಕೆ ಇರುವ ಅಪ್ಪಅಪ್ವಂದ್‌ರ್‌ಗೆ ಸಿಟ್ಟ್ ಬಾದುಲೆ.

ಕೆಲವು ಒಳ್ಳ ಮಕ್ಕಳೂ. ಒಳೊ ತರಕಾರಿ ತೋಟಲಿ, ಗದ್ದೆಲಿ, ಅಲ್ಲಿ ಇಲ್ಲಿ ಕೆಲ್ಸನೂ ಮಾಡಿಕಂಡವೆ. ಓದಿಕೆನೂ ಲಾಯ್ಕ ಓದಿವೆ. ಕರ್‌ಳ್‌ಲಿ ಪಸೆ ಕುದ್ದ ಮಕ್ಕಮಾತ್ರ ಅಹಂಕಾರಿಗಳಂಗೆ ಆಡಿಕಂಡ್, ರೌಡಿತನ ತೋರ್ಸಿಕಂಡ್ ಪೋಲಿನಾಯಿಗಳಂಗೆ ಕಾಲ ಕಳ್ದವೆ. ಅಪ್ಪ ಮಾಡಿ ಇಸಿಟ್ಟ್. ಇನ್ನ್ ಯಾಕೆ ಕಷ್ಟ ಪಡೊಕುಂತ ಗ್ಯಾನ ಮಾಡಿವೆ. ಆವರೆ ಈ ಆಸ್ತಿ, ಹಣ ಇದೆಲ್ಲಾ ಹತ್ತಿ-ಇಳ್ದ್ ಹೋದ ಪ್ರವಾಹಂತ ಗೊತ್ತ್‌ಲೆ. ಕಷ್ಟಪಟ್ಟ್ ಸುಖ ಪಡಿಯೋಕಲ್ಲದೆ ಸುಖಪಟ್ಟ್ ಕಷ್ಟ ಬಾಕಾಗದ್. ಎಷ್ಟೋ ಶ್ರೀಮಂತ ಕುಟುಂಬ ಇಂದ್ ಗತಿಯಿಲ್ಲದಂಗೆ ಆಗೊಳೊ. ಆಸ್ತಿ ಉಟ್ಟ್ ನಡ್ಸವು ಇಲ್ಲೆ. ಮಕ್ಕಳೂ ಒಳೊ, ಆದರೆ ಅವು ಪೇಟೆ ಶೋಕಿಗೆ ಹೊಟ್ಟೋಳೊ. ಪೇಟೆಲಿ ನರಕ ಬರ್ತ್ ಒಳೊ. ಅವು ಇಲ್ಲೇ ಎದೆ ಮುರ್ದರೆ ಚೆಲ್ಲಾಡಿಕಂಡ್ ಉಂಬಕೆ ಬೊತ್ತಾ ?

● **ಬಿ.ಆರ್. ಜೋಯಪ್ಪ, ಮದೆ**

---

## ಪ್ರೀತಿನ ಅಪಾರ್ಥ ಮಾಡಿಕಂಡ ಹೈದ

**ಪೂ**ಜ ಒಂದ್ ಗೂಡೆ. ಅವ್ಳ ಯಾಗೊಳು ಕಾಲೇಜಿಗೆ ನಡ್‌ಕಂಡೆ ಮನೆಂದ ಹೊಗ್‌ತ್ತಿತ್ತ್. ಒಂದ್ ದಿನ ಬೆಳಗ್ಗೆ ಕಾಲೇಜಿಗೋಕೆ ರೆಡಿಯಾಗಿತ್ತ್. ಅಷ್ಟೊತ್ತಿಗೆ ಬಾಗ್ಲ ಬಡ್ದ ಸದ್ದಾತೂಂತ ಬಾಗ್ಲ ತೆಗ್ದ್‌ನೊಡ್ತ್. ನೋಡ್ಕನ ಅವ್ಳಿಗೆ ಶಾಕ್ ಹೊಡದಂಗೆ ಆತ್. ಯಾಕತೇಳ್‌ರೆ. ಅಲ್ಲಿ ಬಂದಿದ್ದಂವ ಬೇರೆ ಯಾರ್ ಅಲ್ಲ. ಅವಳ್ನ ಹಿಂದೆ ಲವ್ ಮಾಡಿ ಬುಟ್ಟದ್ದ ಹೈದ. ಪೂಜಂಗೆ ಒಮ್ಮೆಲೇ ಮನ್ಸ್‌ಗೆ ಎಷ್ಟೋ ಯೋಚನೆ ಬಂದ್‌ಬುಡ್ತ್. ಇಂವ ನನ್ನ ಬುಟ್ಟ್ ಆಗಲೆ 2 ವರ್ಷ ಆಗಿತ್ತ್. ಮತ್ತೆ ಯಾಕೆ ನನ್ನ ಮನೆಗೆ ಬಂದದ್ ಅಂತ ಗ್ಯಾನ ಮಾಡಿಕೆ ಶುರು ಮಾಡ್ತ್. ಅಷ್ಟರ್ಲಿ ಆಂಟೆ ಒಳಗೆ ಬರೋಕಾ ಅಂತ ಕೇಳ್ತ್. ಇವ್ಳ ಬಾ ಅಂತ ಕರ್ದ್ ಹಾಲ್‌ಲಿ ಕೂರ್ಸಿ ಅವಂಗೆ ಕುಡಿಯಕೆ ಕಾಫಿ ಕೊಡ್ತ್. ಅವನ ಹೆಸರ್ ತೀರ್ಥಂತೇಳಿತ್. ಅಂವ ಹೆದಿರಿಕಂಡ್ ಮುಖಲಿ ತುಂಬಾ ಬೆವರ್ ಬಂದಿತ್ತ್. ಪೂಜಾ ಅನ್ನ ನೋಡಿಯಾಕೆ ಬಂದದ್ ಅಂತಾ ಕೇಳ್ತ್. ಅದ್ಕಿ ಅವ ನನ್ನ ಕ್ಷಮಿಸ್ ಪೂಜಾ, ಯಾರ್‌ದೊ ಚಾಡಿ ಮಾತ್ ಕೇಳ್ಕಂಡ್ ನಿನ್ನಂತ ಒಳ್ಳೆಗೂಡೆಗೆ ಮೋಸ ಮಾಡಿಕೆ ನೋಡ್ದೆ. ನಾನ್ ನಿನ್ನ ಪ್ರೀತಿನ ತಪ್ಪಾಗಿ ಅರ್ಥ ಮಾಡಿಕಂಡಿದ್ದೆ. ಅವರ್ಲಿ ನಂದೆನೂ ತಪ್ಪಿಲ್ಲಂತ ನಾನ್ ಹೇಳ್ನೆ. ನೀನ್ ಬಸ್ಸ್‌ಲಿ ಕಾಲೇಜ್ಲಿ ಎಲ್ಲಾ ಹೈದಂಗಳೊಟ್ಟಗೆ ತುಂಬಾ ಮಾತಾಡ್ತಿದ್ದ ಅಂತಾ ನನ್ನ friends ಎಲ್ಲಾ ಹೇಳ್ದೊ. ಅದರ್ನ ನಾನ್ ನಿಜ ಅಂತ ಅಂದ್‌ಕಂಡೆ ನಿನ್ನ ಬುಟ್‌ಬುಟ್ಟೆ. ಆದ್ರೆ ನಂಗೆ ನಿನ್ನ ಬುಟ್ಟ ಮೇಲೆ ಜೀವನನೆ ಬೇಡಾ ಅಂತಾಗ್‌ಬುಟ್ಟುಟು. ಆದರೆ ಈಗ ನಿನ್ನ ಬಗ್ಗೆ ನಿಜ ಸಂಗತಿ ತಿಳ್ದ್ ತುಂಬಾ ಬೇಸರ ಆತ್. ನೀನ್ ನನ್ನ ಬುಟ್ಟ್ ಯಾರ್ನ ಮೊದುವೆ ಆಲೆ ಅಂತಾ ಹೇಳಿದ್ದ ಮಾತ್ ಗ್ಯಾನ ಬಂದ್‌ಕಂಡ್ ಇರ್ತಿತ್ತ್. ನನ್ನ ತಪ್ಪ್‌ನ ಕ್ಷಮಿಸಿ ನನ್ನ ಮೊದುವೆಯಾದಿಯಾ ಅಂತ ಕೇಳಿಕೆ ಬಂದೆ ಅಂತಾ ತೀರ್ಥ ಹೇಳ್ತ್. ಅನ್ನ ತಪ್ಪನ ತಿಳ್‌ಕಂಡತ್ತಲ್ಲಾ ಅಂದ್‌ಕಂಡ್ ಅವ್ಳ ಮೊದುವೆ ಆಕೆ ಒಪ್ಪಿತ್. ಇಬ್ಬರಿಗೂ ಈಗ ಒಂದು ಹೆಣ್ಣ್‌ಕೂಸು ಉಟ್ಟ್.

● **ಬಿದರ್‌ಪಣೆ ಪವಿತ್ರಮನು**
**ಕಟ್ಟೆಮಾಡು**

# ಮಿಲಿಟ್ರಿಗೆ ಹೋದ ಸೀತವ್ವಜ್ಜಿ

**ಸೀ**ತವ್ವ ಅಜ್ಜಿನ ರಗಳೆ ತೇಳ್ರೆ, 'ಸೀತ' ಆದರೆ, ಸೀತ ಹೆಂಗೆ ರಗಳೆ ಕೊಟ್ಟದೆ ನೋಡಿ ಅದೇ ತರ ಈ ಸೀತವ್ವ ಅಜ್ಜಿನ ರಗಳೆ.

ಸೀತವ್ವ ಅಜ್ಜಿಗೆ '3' ಮಕ್ಕ ಇದ್ದೊ. ಹಿರೀದ್‌ಮಗಳು,ಮತ್ತೆ ಎರಡ್‌ಮಜಂದರ್. ಮಗಳ ಮದುವೆ ಆವುಟು, ಮಜಂದರ್ ಎರಡ್ ಜನ ಮದುವೆ ಆಗೊಳೊ. ಒಬ್ಬ ಮಜ ಮಿಲಿಟ್ರಿ, ಇನ್ನೊಂದು ಮಜ ಮನೆಲಿ ಉಟ್ಟ್ಟ. ಅಜ್ಜಿಗಳ್ದೆ ಉಟ್ಟಲೆ, "ಒಂದು ಸೊಸೆನ ಕಣ್ಣಿಗೆ ಬೆಣ್ಣೆ, ಒಂದು ಸೊಸೆನ ಕಣ್ಣಿಗೆ ಸುಣ್ಣ" ತೆಳ್ಪಂಗೆ ಈ ಅಜ್ಜಿಮಾಡಿಕೆ ಸುರು ಮಾಡ್ತ್.

ಇತ್ತಸೆನಿ ಸೆನಿ ತೇಳಿ ಮಿಲಿಟ್ರಿಗೆ ಹೋದ ಮಜ ಬಾತ್. ಬಾಕನ ಮನೆಗೆ ತೇಳಿ ಕುರಿ ಮಾಸ, ಕೋಳಿಮಾಸ ಇನ್ನ್ ಬೇರೆ ತಿಂಡಿ ತಂದಿತ್ತ್. ತಂದ ಮಾಸನ ಎಲ್ಲ ರಾತ್ರಿ ಊಟಕ್ಕೆ ತೇಳಿ ಗೈಪು ಮಾಡ್ದೋ. ಬಾರಿ ಸಡಗರಲಿ ಎಲ್ಲವೂ ಸೇರಿ ಊಟ ಮಾಡುಕ್ಕು ತೇಳಿ, ಮಿಲಿಟ್ರಿ ಮಜ ಅಣ್ಣ ಅತ್ತಿಗೆನ ಊಟಕ್ಕೆ ಬಾಕೆ ಹೇಳ್ತ್. ಅಂದ್ ಅಜ್ಜಿನ ಮಗಳೂ ಕೂಡ ಬಂದಿತ್ತ್.

ಊಟಕ್ಕೆ ಎಲ್ಲವೂ ಬಂದ್ ಕುದ್ದ್ ಆಕನ ಶೀತವ್ವಜ್ಜಿನ ಹಳೇ ರಾಮಾಯಣನ ಮಜನ ಎದ್‌ರ್ ಮಟ್‌ಕಂಡ್ ಹೇಳಿಕೆ ಸುರು ಮಾಡ್ತ್. "ನಾನ್ ಮಾಡ್ದ್ರ್ನ ಕುತ್ತಿಗೆ ಗಂಟ ತಿಂಬಕೆ ಗೊತ್ತುಟು ಈ ಮುಂಡೆಗೆ ಅವ್ವ ಅಂತವ್ವ, ಇಂತವ್ವ" ತಾ. ಎಷ್ಟಾದರೂ ಮಜಂಗ ಬಂದ ಸೊಸೆ ತಾನೆ. ಈ ರಾಮಾಯಣ ಮಜ ತಂದ ಕೆಂಪು ಕುಪ್ಪಿದ್ ಪ್ರಭಾವ.ಸುರಾತ್‌ಅತ್ತೆ ಸೊಸೆಗೆ. ಮಿಲಿಟ್ರಿ ಮಜಂಗೆ ತಲೆ ಬಿಸಿ ಆತ್. "ಅವ್ವ ನೀನ್ ಜಗಳ ಮಾಡುದುಬ್ಯಾಡ. ನಾಳೆ ನನ್ನೊಟ್ಟಗೆ ಮಿಲಿಟ್ರಿಗೆ ಬಾ ನಾನ್ ಕರ್ಕೊಂಡೋನೆ.ಅವ್ವಂಗೆ ಇಷ್ಟೆ ಬೇಕಾದ್ ಒಂದ್ ಗಾದೆ ಹೇಳ್ದಂಗೆ, "ವೈದ್ಯ ಹೇಳ್ದ ಹಾಲ್, ರೋಗಿ ಬಯಸಿದ್ ಹಾಲ್".

ಸೀತವ್ವಜ್ಜಿಗೆ ಮಜ ಹೆಂಗಾರ್ ಮಿಲಿಟ್ರಿಗೆ ಕರ್ಕೊಂಡೋದೆತಾ ಕುಸೀ ಆತ್. ಆದರೆ ಮನೆಲಿ ಸಾಕಿದ್ದ ದನ, ಕೋಳಿ, ಹಂದಿ ನಾಯಿನ ಎಂತ ಮಾಡ್ದುತಾ ? "ಸೊಸೆನ ನೆರಳ್ ಕೂಡ ಕಾಂಬಕಾದುಲೆ" ಅಷ್ಟರ ಮಟ್ಟಿಗೆ ಸೊಸೆ ಅತ್ತೆಗೆ ದೂರ ಆಗುಟು ಇವರ್ನ ಎಲ್ಲ ಮಗಳಕೈಗೆ ಕೊಟ್ಟ್ ಹೋದುತಾ ಗ್ಯಾನ ಮಾಡಿ ಕೋಳಿಗಳನ್ನ ರಾತ್ರಿ ಬರ್ಜಿ [ಕೂಂಟಗೆ]ಲಿ ಹಾಕಿ ಪ್ಯಾಕ್ ಮಾಡ್ತ್,

ಬೆಳಿಗ್ಗೆ ಇದನ್ನೆಲ್ಲ ತಕಂಡ್ ಹೋಕೆ ಚಾಮಿನ ಜೀಪುಗೆ '9' ಗಂಟೆಗೆ ಬಾಕೆ ಹೇಳ್ದೊ. ಚಾಮಿನ ಜೀಪು ಸರಿಯಾಗಿ 9 ಗಂಟೆಗೆ ಬಾತ್. ಆದ್ರೂ ಅಜ್ಜಿನ ಪ್ಯಾಕ್ ಆತ್‌ಲೆ.ಹಂದಿ ಒಂದು ಕಡೆಂದ "ಕಿರೀ...ರೀ" ತೇಳಿ ಕಿರುಚುತಾ ಉಟ್ಟ್ಟ.ಸ್ವಲ್ಪ ಹೊತ್ತಿಗೆ ಅಜ್ಜಿನ ಮಜನು, ಪಿಳ್ಳನು [ಮಗಳ ಮಗ] ಹಂದಿನ ಕೈಕಾಲ್ ಕಟ್ಟಿ ಹೊತ್ತ್‌ಕಂಡ್ ಬರತ್ತಾ ಒಳೊ. ಜೊತೆಲಿ ಸೀತವ್ವಜ್ಜಿ ನಾಲ್ಕೈದ್ ಕಟ್ಟಾಸ್ ಹಿಡ್ಕಂಡ್ ಬರುತ್ತಾ ಒಳೊ. ಇದೆಲ್ಲನಾ ಚಾಮಿ ನೋಡಿ "ಇದೆಲ್ಲೊ ದೆವ್ವ ಕೊಡಿಕೆ ಇರಕು ಕಂಡದೆ ತೇಳಿ ಸುಮ್ಮನಾದೊ". ಸಾಮಾನ್ ಎಲ್ಲಾ ಬಾಡಿಗೆ ಮನೆ ಖಾಲಿ ಮಾಡಿ ಬಂದಂಗೆ, ಮನೆ ಸಾಮಾನ್ ಎಲ್ಲ ತಕಂಡ್ ಬಂದ್ ಜೀಪ್ ಹಕ್ಕಲೆ ಇಟ್ಟೊ

ಜೀಪ್ ಡ್ರೈವರ್ ಚಾಮಿ ಸಾಮಾನ್‌ನ ಜೀಪ್‌ಗೆ ಹಾಕಿಕೆ ಹೇಳ್ದೊ, ಸಾಮಾನ್ ಎಲ್ಲ ಜೀಪ್‌ಗೆಹಾಕಿ ಆಕನ ತುಂಬಿ ಹೋತ್. ಈ ಹಂದಿನ ಎಲ್ಲಿ ಹಾಕುದತಾ ಪ್ರಶ್ನೆ ಆತ್ "ಅಲ್ಲ ? ಈ ಹಂದಿ, ಕೋಳಿ, ಎಲ್ಲಿಗೆ ತಾ" ಚಾಮಿ ಕೇಳ್ದೊ. ಶೀತವ್ವಜ್ಜಿ ಹೇಳ್ದೊ "ಇದ್ ಮಗಳ ಮನೆಲಿ ಬುಟ್ಟ್ ಮಜ ನೊಟ್ಟಗೆ ಮಿಲಿಟ್ರಿಗೆ ಹೋದುತಾ".ಚಾಮಿ ಗ್ಯಾನ ಮಾಡಿ "ಅಲ್ಲ ಮನೆಲಿ ಮಜಂದರ್ ಸೊಸೆಕ ಇಲ್ಲೆನಾತಾ", ಸೀತವ್ವಜ್ಜಿ ಹಳೇ ರಾಮಾಯಣನ ಸುರು ಮಾಡ್ತ್. ಮಾತ್ ನಿಂತ ಮೇಲೆಚಾಮಿ ಹೇಳ್ದೊ "ಅಲ್ಲ ನೀವು ಇದನ್ನೆಲ್ಲ ಮಗಳ ಮನೆಗೆ ಕೊಟ್ಟ್ ಕಳ್ಸಿರೆ ಹೇಂಗೆ,ನೀವು ಮನೆಗೆ ತಿರುಗಿ ಬಾದುಲೆನಾ. ಬಾಕನ ಒಂದು ಚೆಂಬು ನೀರ್ ಕೊಡಕಾದರೆ ಮಜ ಸೊಸೆಕ ಬೇಕ್. ಅದರಂದ ಹಂದಿ ಕೋಳಿನ ಮನೆಲಿರುವ ಮಜನ ಕೈಲಿ ನೋಡಿಕಣಿಕೆ ಕೊಟ್ಟ್ ಹೋಗಿ", ಸೀತವ್ವಜ್ಜಿ ಚಾಮಿನವರ ಮಾತ್‌ನ ಗ್ಯಾನ ಮಾಡಿ, ಹಂದಿ, ಕೋಳಿನ ಮನೆಲಿರುವ ಮಜನಲ್ಲಿ ಬುಟ್ಟ್ ಉಳ್ದ ಸಾಮಾನ್‌ಗಳನ್ನ ಮಗಳ ಮನೆಲಿ ಬುಟ್ಟ್ ಮಿಲಿಟ್ರಿಗೆ ಹೋಗಿ ಈಗ ರಜೆ ಹಾಕಿ ಮನೆಲಿ ಬಂದ್ ಸುಖವಾಗಿ ಒಳೋ.

ಆದ್ರೆ ಅಜ್ಜಿ ಮಿಲಿಟ್ರಿಗೆ ಹೋಕನ ಮನೆಲಿದ್ದವು 'ಹುಲಿಗ' ಆಗಿದ್ದೊ. ಅಜ್ಜಿ ಮಿಲಿಟ್ರಿಂದ ಬಂದಂಗೆ ಮನೆಲಿದ್ದವು 'ಇಲಿಗ' ಆದೋ.

● **ಹುಲಿಮನೆ ರಾಮಣ ಲೋಕೇಶ್**
ಮದೆ

---

## ನಗೆಹನಿಗ

ಮಾಸ್ಟ್ರ : ನಿಮ್ಮ ಹೈದ ನಾನಿಲ್ಲದಿರಕಾಕನ ನನ್ನ ಕುರ್ಚಿಲಿ ಕುದ್ದ್‌ಕಂಡ್ ನಾನ್ ಮಾಸ್ಟ್ರತ ಹೇಳ್ತಿತ್ ಗಡ

ಹೈದನ ಪೊಪ್ಪ : 'ಲೋ ಪೋಕ್ರಿ ಮಗನೇ ನಿಂಗ್ಯಾಕೆ ಬೇಕಾಗಿತ್ತ್‌ನೆ ಆ ಸುಟ್ಟ ಮುಠಾಳ ಕೆಲ್ಸ'.ಅಂತ ಕೆಲ್ಸ ತರ್ಲೆಗ ಮಾಡ್ದುತ ಹೇಳ್ತ್.

# ಸೂಚನೆ

ಮಾನ್ಯ ಧಾನಿಗಳೆ,

ಅರೆಭಾಷೆ ಸಾಂಸ್ಕೃತಿಕ ಸಮಿತಿ ವತಿಯಿಂದ ದಿನಾಂಕ 12-4-98 ರಂದು ಅರೆಭಾಷೆ ಕಾರ್ಯಕ್ರಮ ವನ್ನು ನಡೆಸುತ್ತಿದ್ದೇವೆ. ತಮ್ಮಗಳ ಧನ ಸಹಾಯದಿಂದ ನಡೆಯುವ ಈ ಕಾರ್ಯಕ್ರಮಕ್ಕೆ ತಾವುಗಳು ಸ್ಪಂದಿಸಿ ರುವುದು ಹೆಮ್ಮೆಯ ಸಂಗತಿ. ನಿಮ್ಮ ಧನ ಸಹಾಯಕ್ಕೆ ಪ್ರತಿಯಾಗಿ ನಾವು ನಿಮ್ಮ ಫೋಟೋವನ್ನು (ಒಂದು ಸಾವಿರ ಮತ್ತು ಐದುನೂರು ಕೊಟ್ಟವರ) ನಮ್ಮ ಕೊಡಗು ಸಂಗಾತಿಯಲ್ಲಿ ಮುದ್ರಿಸಲು ತಾರೀಖು 15-3-98ರ ಒಳಗೆ ಕೊಡಗು ಸಂಗಾತಿಯ ಕಛೇರಿಗಾಗಲಿ, ಅರೆಭಾಷಿಕ ಸಾಂಸ್ಕೃತಿಕ ಸಮಿತಿಯ ವಿಳಾಸಕ್ಕಾಗಲಿ ಕಳುಹಿಸಿ ಕೊಡುವುದು. ತಮ್ಮಿಂದ ಫೋಟೋ ಮತ್ತು ಸರಿಯಾದ ವಿಳಾಸ ಬಾರದಿದ್ದರೆ ನಾವು ನಿಮಗೆ ಕೊಟ್ಟ ರಶೀದಿ ಯಲ್ಲಿ ಇರುವ ಹೆಸರನ್ನೇ ಮುದ್ರಿಸಬೇಕಾಗುತ್ತದೆ. ಮುನ್ನೂರು ರೂಪಾಯಿ ಕೊಟ್ಟು ಸಹಕರಿಸಿದವರು ಸಹ ತಮ್ಮ ಮನೆಯ ವಿಳಾಸ, ತಮ್ಮ ಹಾಗೂ ಮನೆಯವರ ಸರಿಯಾದ ಹೆಸರನ್ನು ಈ ಮೇಲೆ ಹೇಳಿದ ವಿಳಾಸಕ್ಕೆ ದಿನಾಂಕ 15-3-98ರ ಒಳಗೆ ಕಳುಹಿಸಿಕೊಡಬೇಕೆಂದು ವಿನಂತಿಸುತ್ತೇವೆ. ತದನಂತರ ಬಂದವುಗಳನ್ನು ಸಮ ಯದ ಕೊರತೆಯಿಂದ ಸ್ವೀಕರಿಸಲಾಗುವುದಿಲ್ಲ.

ಕಾರ್ಯಾಧ್ಯಕ್ಷರು

## ಪ್ರಿಯ ಓದುಗರ ಗಮನಕ್ಕೆ

ಆತ್ಮೀಯ ಓದುಗರೆ,

ಏಪ್ರಿಲ್ ತಿಂಗಳ 12ರಂದು ಮೈಸೂರಿನ ಕಲಾಮಂದಿರದಲ್ಲಿ ಅರೆಭಾಷೆ ಕಾರ್ಯಕ್ರಮ ಹಮ್ಮಿಕೊಂಡಿ ರುವುದು ನಿಮಗೆ ತಿಳಿದ ವಿಚಾರ. ಆದ್ದರಿಂದ ಅರೆಭಾಷೆಯ ಕಾರ್ಯಕ್ರಮಗಳನ್ನು ಕೊಡುವವರು ಮಾರ್ಚ್ 15ರೊಳಗೆ ಸಂಗಾತಿಯ ವಿಳಾಸಕ್ಕೆ ಬರೆದು ತಿಳಿಸಲು ಕೋರಲಾಗಿದೆ.

ಕಾರ್ಯಾಧ್ಯಕ್ಷರು

## ವಿನಂತಿ

ಪ್ರಿಯ ಓದುಗರೆ, ಕೊಡಗು ಸಂಗಾತಿಯಲ್ಲಿ ಬರುವ ಸುದ್ಧಿ, ವಿಚಾರ, ವ್ಯಕ್ತಿಪರಿಚಯಗಳನ್ನು ಪ್ರಕಟ ಸಲು ಹಣ ಕೊಡಬೇಕಾಗುತ್ತದೆಂದು ಕೆಲವು ಕಿಡಿಗೇಡಿಗಳು ವದಂತಿ ಹಬ್ಬಿಸಿದ್ದಾರೆ. ಸುದ್ದಿ, ವಿಚಾರಗಳನ್ನು [ಜಾಹೀರಾತು ಹೊರತುಪಡಿಸಿ) ಪ್ರಕಟಿಸಲು ಯಾರೂ ಹಣವನ್ನು ಕೇಳುತ್ತಿಲ್ಲ. ಆದ್ದರಿಂದ ಇನ್ನು ಮುಂದೆಯೂ ಸುದ್ದಿ ವಿಚಾರ, ಜಾಹೀರಾತುಗಳನ್ನು ಕಳುಹಿಸಿಕೊಟ್ಟು ಪತ್ರಿಕೆಯು ಬೆಳೆಯಲು ಸಹಕರಿಸಬೇಕಾಗಿ ಕೋರುತ್ತೇವೆ

ಸಂಪಾದಕಿ

K·R.N.N. 240

With Best Compliments From

**D.K. MANJUNATH and D.K. PRABHU**

## HOTEL

# PAVITHRA PARADISE

# ಹೋಟೇಲ್ ಪವಿತ್ರ ಪ್ಯಾರಡೈಸ್

**BASAVESHWARNAGAR, BANGALORE-560079.**

**Telephone :-** 3358923, 3352569, 3352721, 3357685

*AND*

# HOTEL PULIKESHI

**Gandhinagar, Bangalore-560 009.**

Telephone :- 2267925, 2269926

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-21 Published at Mysore, Editor PATTADA. P. SHEELAMANI, No. 35, 1st Cross, 4th Block (Near Divisional Telephone Office) Jayalakshmipuram, Mysore-570 012 Phone : 516771